| ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ |

|| ಶ್ರೀಃ ||

... ಓಂ ನಮೋ ನಾರಾಯಣಾಯ ...

ಗೀತೆಯ ನಲವದೆ ಭಜಿಸ್ಯೆ |
ಪ್ರೀತಿಯೊಳಾ ಹರಿ ಸಹಸ್ರ ನಾಮವ ಜಪಿಸ್ಯೆ ||
ಜಾತನೆ ಸುಕೃತವ ಗಳಿಸ್ಯೆ |
ಕೌತುಕವೆನೆ ಪರವು ಪದದೆ ಸತ್ಯಂ ಸುಖಿಸ್ಯೆ ||

ದೊಡ್ಡಬೆಲೆ ನಾರಾಯಣಶಾಸ್ತ್ರಿ ರಚಿತ

ಪ್ರಭಾ ವಿವರಣ ಸಹಿತಂ

# ಶ್ರೀ ವಿಷ್ಣು ಸಹಸ್ರನಾಮರತ್ನಂ

ಪ್ರಕಾಶಕ:—ಸುಬ್ರಾವ ಗೋಪಾಲ ಉಭಯಕರ.

ಪ್ರಥಮ ಮುದ್ರಣ ೧,೦೦೦.

ಬೆಂಗಳೂರು

ಶ್ರೀ ವೆಂಕಟೇಶ ಮುದ್ರಾಕ್ಷರಶಾಲಾ, ೧೯೧೯.

 ಕ್ರಯ ೦=೧೨=೦.

| ಸಹಸ್ರನಾಮ್ನೇ ಪುರುಷಾಯ ಶಾಸತೇ |

| ಸಹಸ್ರಕೋಟೀಯುಗಧಾರಿಣೇ ನಮಃ | ೦

| ಸಹಸ್ರಪಾದಾಕ್ಷಿಶಿರೋರುಬಾಹವೇ |

ನನ್ನ ಭ್ರಾತೃವರ್ಯರಾದ ಈ ನಾರಾಯಣ ಗೋಪಾಲ ಉಭಯಕರ ಇವರು
೮ ಕೋಟಿ ಅಷ್ಟಾಕ್ಷರೀ ಜಪಾನುಷ್ಠಾನವನ್ನು ಪ್ರಾರಂಭಿಸಿದ್ದರು.
ದೇಹಾವಸಾನ ಕಾಲಕ್ಕೆ ೧ ಕೋಟಿ ೩೫ ಲಕ್ಷ ಜಪ ಮುಗಿದಿತ್ತು.
ಯಾವ ಬಗೆಯ ಆಯಾಸವೂ ಇಲ್ಲದೆಯೇ ಯೋಗಿಗಳಂತೆ
ಜಪಮಾಲೆಯಿಂದ ಜಪಮಾಡುತ್ತಲೇ ದೇಹವನ್ನು
ಬಿಟ್ಟು ಶ್ರೀಮನ್ನಾರಾಯಣ ಸಾಯುಜ್ಯ
ಸಾಮ್ರಾಜ್ಯವನ್ನು ಪಡೆದರು.

ಜನ್ಮ ಶಕ
೧೭೬೬ನೆ ಕ್ರೋಧಿ
ಸಂ|| ಮಾಘವದ್ಯ
೧೨ ಬುಧವಾರ.

ಸಾಯುಜ್ಯ ಶಕ
೧೮೩೬ನೆ ಆನಂದ
ಸಂ|| ಜ್ಯೇಷ್ಠವದ್ಯ
೧೩ ರವಿವಾರ.

ನಾರಾಯಣ ಗೋಪಾಲ ಉಭಯಕರ.

ಸಾಂಸಾರಿಕ ಸುಖದಲ್ಲಿ ಕ್ರೋಧ
ವುಳ್ಳವರಾಗಿ ಅಘವನ್ನು ನೀಗಿ, ಬುಧರಾಗಿ
ತಮ್ಮ ಅನುಷ್ಠಾನದಿಂದ ಯೋಗಿ ಜ್ಯೇಷ್ಠರೆನಿಸಿ
ರವಿಮಂಡಲ ದ್ವಾರಾ ಆನಂದವನ್ನು ಪಡೆದ ಈ ಮಹನೀಯರಿಗೆ
ಈ ಪುಸ್ತಕವು ಭಕ್ತಿ ಪ್ರೇಮ ಪೂರ್ವಕವಾಗಿ ಅರ್ಪಿತವಾಗಿದೆ.

ಈ ವಿಷ್ಣುಸಹಸ್ರನಾಮಾವಳಿಯು—ಜ್ಞಾನಿಗಳಿಗೆ ಸ್ವಾನಂದದ ಪ್ರಾದುರ್ಭಾವ, ಯೋಗಿಗಳಿಗೆ ಚಿತ್ತಸ್ಥೈರ್ಯ, ಭಾವಿಕಭಕ್ತರಿಗೆ ಶ್ರೀಹರಿಭಕ್ತಿಪ್ರೇಮೋನ್ನತಿ, ಸಾಧಕರಿಗೆ ತಂತಮ್ಮ ಧ್ಯೇಯವಸ್ತುವಿನಲ್ಲಿ ತಾದಾತ್ಮ್ಯವೃದ್ಧಿ, ಮುಮುಕ್ಷುಗಳಿಗೆ ಪರಮಾತ್ಮಭಕ್ತಿಯಲ್ಲಿ ಅಭಿರುಚಿ,ಸಾಂಸಾರಿಕರಿಗೆ ಭಗವನ್ನಾಮ ಮಹತ್ವದರ್ಶನೋಪಾಯ, ಭವಬಂಧಭೀರುಗಳಿಗೆ ಬಂಧವಿಮೋಚನಮಾರ್ಗವೂ ಆಗಿದೆ. ಆದುದರಿಂದ ಸಂಸಾರ ಸಾಗರವನ್ನು ದಾಟಬೇಕೆಂದು ಕುತೂಹಲ ಪಡುವವರು ಈ ನಾಮಾವಳಿಯನ್ನು ಒಮ್ಮೆಂದೊಮ್ಮೆ ಮನನಮಾಡುತ್ತಿದ್ದರೆ ಚಿತ್ತಶುದ್ಧಿಯಾಗಿ ಪರಮಾತ್ಮಪ್ರಾಪ್ತಿಯು ಸುಲಭದಿಂದ ಆಗುತ್ತೆಂದು ಸಪೂರ್ಣ ನಂಬುತ್ತೇನೆ.

ನನ್ನ ಅಣ್ಣಂದಿರಾದ ಕೈಲಾಸವಾಸಿ ನಾರಾಯಣ ಗೋಪಾಲ ಉಭಯಕರ ಇವರು ಶ್ರೀ ವಿಷ್ಣುಸಹಸ್ರನಾಮದ ಮೇಲೆ ಅಕ್ಷರಾನುಕ್ರಮದಿಂದ ಸಹಸ್ರನಾಮಗಳ ಭಾವಾರ್ಥವನ್ನು ಕನ್ನಡದಲ್ಲಿ ಬರೆದಿದ್ದರು, ಈ ಪುಸ್ತಕವು ನನ್ನ ಕೈಗೆ ಅಕಸ್ಮಾತ್ತಾಗಿ ಸಿಕ್ಕಿದ್ದರಿಂದ ಅವರಿಗೆ ಭಗವದ್ಭಕ್ತಿಯಲ್ಲಿದ್ದ ಪ್ರೇಮವು ಸಕಲ ಜನರಿಗೂ ಸಿಕ್ಕುವಹಾಗೆ ಮಾಡಬೇಕೆಂಬ ಭಾವನೆಯಿಂದ ಸದರಿ ಪುಸ್ತಕವನ್ನು ಅದಮನೆ ವಿದ್ವಾಂಸರೂ, ಬೆಂಗಳೂರು ಗll ಕೊಲಜಿಯೆಟ್ ಹೈಸ್ಕೂಲ್ ಉಭಯ ಭಾಷಾಪಂಡಿತರೂ ಆಗಿರುವ, ಬ್ರll ಶ್ರೀll ದೊಡ್ಡಬೆಲೆ, ನಾರಾಯಣಶಾಸ್ತ್ರಿಗಳವರಿಗೆ ಶೋಧಿಸಿ ಕೊಡಹೇಳಿ ಕೊಟ್ಟೆನು. ಅವರು ಇದನ್ನು ಪರಿಶೋಧಿಸಿ, ಲೋಕಮಾನ್ಯವಾಗುವಹಾಗೆ ಸಹಸ್ರನಾಮ ಶ್ಲೋಕಗಳ ನಾಮಾವಳಿಗೆ ಅನುಸಾರವಾಗಿ ಶ್ರೀ ಶಂಕರಾಚಾರ್ಯರವರ ಭಾಷ್ಯಕ್ರಮವನ್ನನುಸರಿಸಿ ಕೆಲವು ಕಡೆಗಳಲ್ಲಿ ಒಂದೊಂದು ನಾಮಕ್ಕೆ ಎರಡು ಮೂರು ನಾಲ್ಕು ಅರ್ಥಗಳ ಪ್ರಕಾರ ಬಹಳ ವಿಶದಪಡಿಸಿ, ಎಲ್ಲರೂ ಆನಂದಿಸುವಂತೆ ಬರೆದು ಇದಾರೆ, ನಾನು ಆಜನ್ಮ ಸ್ಮರಿಸುತ್ತೇನೆ. ಇಡಿ ಕರ್ಣಾಟಕ ಪ್ರಾಂತದರಿಗೆ ಈ ಗ್ರಂಥದ ಉಪಯೋಗವು ಆಗುವುದೆಂದು ನಾನು ನಂಬುತ್ತೇನೆ. ಈ ಲೋಕೋಪಯೋಗ ಗ್ರಂಥವನ್ನು ಬಹಳ ಶ್ರಮ ತೆಗೆದುಕೊಂಡು ಬರೆದ ಬಗ್ಗೆ ಸರ್ವವ್ಯಾಪಕ ಶ್ರೀವಿಷ್ಣು ಪರಮಾತ್ಮನು ಅವರಿಗೆ ಪ್ರಸನ್ನನಾಗಲೆಂದು ಶ್ರೀ ವಾಸುದೇವನ ಚರಣಾರವಿಂದದಲ್ಲಿ ಪ್ರಾರ್ಥಿಸುತ್ತೇನೆ.

ಈ ಪುಸ್ತಕವನ್ನು ಛಾಪಿಸುವ ಖರ್ಚನ್ನು ನನ್ನ ತಮ್ಮನ ಮಗನಾದ ಚಿll ರಾll ದೇವರಾವ ಶಿವರಾಮ ಉಭಯಕರ (ಮೈಸೂರು ಮಹಾರಾಜಾ

ಮಿಲ್ಲಿನ ನೂಲು ಏಜಂಟ್) ಇವರು, ಅವರ ದೊಡ್ಡಪ್ಪ ಕೈ|| ವಾ|| ನಾರಾಯಣ ಗೋಪಾಲ್ ಉಭಯಕರ ಇವರ ಮೇಲೆ ಇರುವ ಭಕ್ತಿಭಾವದಿಂದ ಕೊಟ್ಟಿರುತ್ತಾರೆ. ಇಂದ ಚಿಕ್ಕವಯಸ್ಸಿನಲ್ಲಿ ಅವರಿಗಿರುವ ಧರ್ಮಬುದ್ಧಿಯು ಬಹಳ ಶ್ಲಾಘ್ಯವಾದದ್ದು. ಶ್ರೀಹರಿಯು ಅವರಿಗೂ ಅವರ ಕುಟುಂಬಕ್ಕೂ ಆಯುರಾರೋಗ್ಯ ಸಂಪತ್ತಿಯನ್ನು ಕೊಟ್ಟು, ಇನ್ನೂ ಅನೇಕ ಬಡ ಜನರಿಗೆ ಉಪಕರಿಸುವಂತೆ ಅವರ ಅಂತರಂಗದಲ್ಲಿ ಪ್ರೇರಿಸುತ್ತಾ ಕಾಪಾಡುತ್ತಿರಲಿ ಎಂದು ಶ್ರೀ ವಾಸುದೇವನನ್ನು ಪ್ರಾರ್ಥಿಸುತ್ತಾ ಈ ಪ್ರಸ್ತಾವನೆಯನ್ನು ಪೂರ್ಣಮಾಡುತ್ತೇನೆ.

---



---

ಸುಲ್ತಾನಪೇಟೆ, 118 ಬೆಂಗಳೂರು ಸಿಟಿ.

ಸಜ್ಜನರ ದಾಸಾನುದಾಸ,
ಸುಬ್ರಾವ ಗೋಪಾಲ ಉಭಯಕರ.



॥ ಶ್ರೀಃ ॥

— ಓಂ ನಮೋ ನಾರಾಯಣಾಯ —



ಕಂ॥ ಹಗ ಲಿರುಳೆನ್ನದೆ ಸತತಂ ।
ಭಗವ ನ್ನಾಮವನೆ ಪೇಳ್ವ ರಸನೆಯೆ ರಸನೆ ॥
ಪೊಗಳಲ್ ಬೇರೊಂದ ನದಾ ।
ಮೊಗದೊಳ್ ತಾಂ ವಿಷದಬಳ್ಳಿಬಳೆದಿಹು ದೈಸೆ ॥

ಈ ಪ್ರಪಂಚದಲ್ಲಿ ಮಾನವರಾದ ನಾವು ವಿವೇಕನಿಧಿಯಾದ ಪುರುಷ ಜನ್ಮವನ್ನು ಪಡೆದು, ಪುರುಷಾರ್ಥವನ್ನು ಸಂಪಾದಿಸದೆ ಹೋದರೆ ಅತ್ತಿಯ ಹಣ್ಣಿನಲ್ಲಿಹುಟ್ಟಿ ಸಾಯುವ ಹುಳಗಳಿಗೂ ಈನಮಗೂ ವ್ಯತ್ಯಾಸವೇನು? ಆ ಪುರುಷಾರ್ಥವೆಂಬುದು ಧರ್ಮಾರ್ಥಕಾಮ ಮೋಕ್ಷಗಳೆಂದು ನಾಲ್ಕುಬಗೆ, ವಿಚಾರ ಮಾಡಿದರೆ ಅವುಗಳೊಳಗೆ ಮೊದಲನೆಯ ಮೂರೂ ಅನಿತ್ಯಗಳೆನಿಸಿ ನಾಲ್ಕನೆಯದೇ ನಿತ್ಯಾನಂದಸ್ವರೂಪವೆಂದು ಶಾಸ್ತ್ರದಿಂದ ನಿಶ್ಚಿತವಾಗಿದೆ. ಆ ಪರಮ ಪುರುಷಾರ್ಥವನ್ನು ಪಡೆಯಲು ಸಾಧಕಗಳೆನಿಸಿರುವ ವೇದಶಾಸ್ತ್ರಗಳೊಳಗೆಲ್ಲ ಶ್ರೀ ಭಗವದ್ಗೀತಾ, ವಿಷ್ಣುಸಹಸ್ರನಾಮ ಎಂಬೀ

ಎರಡೇ, ಇಂದ್ರಿಯಗಳೊಳಗೆ ಕಣ್ಣುಗಳು ಹೇಗೋ ಹಾಗೆ ಪ್ರಧಾನಗಳಾಗಿವೆ. ಗೀತೆಯ ವಿಷಯವನ್ನು ಬೇರೆ ಅರಿಕೆ ಮಾಡಿದೇನೆ. ನಾವು ಯಾವಾಗ ಎಲ್ಲಿ ಯಾವ ಬಗೆಯ ಫಲವನ್ನು ಪಡೆಯಬೇಕಾದರೂ, ಅದಕ್ಕೆ ಮೊದಲು ಒಳ್ಳೆಯ ಸಂಸ್ಕಾರವನ್ನು ಕಲ್ಪಿಸಿ ಇರಬೇಕು. ಹೇಗೆಂದರೆ— ಬಟ್ಟೆಯು ಶುದ್ಧವಾಗಬೇಕಾದರೆ ಒಗತೆಯೇ ಮೊದಲನೆಯ ಸಂಸ್ಕಾರ, ಪಾತ್ರೆಯು ನಿರ್ಮಲವಾಗಬೇಕಾದರೆ ಉಜ್ಜೋಣವೇ ಪೂರ್ವ ಸಂಸ್ಕಾರ, ರತ್ನವು ಥಳಥಳ್ಯವನ್ನು ಪಡೆಯಬೇಕಾದರೆ ತರಣೆ ಹಿಡಿಯಬೇಕು, ಅಕ್ಕಿಯನ್ನು ಸಂಪಾದಿಸಬೇಕಾದರೆ ನೆಲ್ಲನ್ನು ಕುಟ್ಟಬೇಕು, ಧನವನ್ನು ಆರ್ಜಿಸಬೇಕಾದರೆ ವಿದ್ಯೆಯು ಆವಶ್ಯಕ, ಧರ್ಮಸಂಪಾದನೆಗೆ ಸತ್ಕರ್ಮಾಚರಣೆಯೇ ಮುಖ್ಯ. ಹೀಗೆಯೇ ಪುನರ್ಜನ್ಮರಹಿತನಾದ, ಅಥವಾ ದುಃಖಧ್ವಂಸರೂಪವಾಗಿರುವ "ಮುಕ್ತಿ" ಎಂಬ ಅಮೋಘ ಫಲವನ್ನು ಹೊಂದಬೇಕಾದರೆ ಆತ್ಮಜ್ಞಾನವು ಬೇಕು. ಆ ಜ್ಞಾನಕ್ಕಾಗಿ ಪೂರ್ವಕಾಲದಲ್ಲಿ ಇಂದ್ರಿಯನಿಗ್ರಹ, ಅರಣ್ಯವಾಸ, ದ್ವಂದ್ವದುಃಖಸಹನ, ವಿರಕ್ತಿ, ಶ್ರವಣ ಮನನಾದಿಗಳು, ಸಮಾಧಿ ಮೊದಲಾದ ಎಷ್ಟೋ ಸಲಕರಣೆ ಬೇಕಾಗಿತ್ತು, ಇವೆಲ್ಲ ಅನುಕೂಲಿಸಿದರೂ, ಹೀಗೆಯೇ ಅನೇಕಜನ್ಮಗಳು ಕಳೆದ ಮೇಲೆಯೇ ಜ್ಞಾನವು ಉಂಟಾಗಿ ಕೈವಲ್ಯವು ಲಭಿಸಬೇಕು. "ಬಹೂನಾಂಜನ್ಮನಾಮಂತೆ ಜ್ಞಾನವಾನ್ ಮಾಂ ಪ್ರಪದ್ಯತೆ" ಎಂದು ಶ್ರೀಕೃಷ್ಣಭಗವಂತನು ಅಪ್ಪಣೆ ಕೊಡಿಸಿದಾನೆ. ಬಿತ್ತವು ಒಳ್ಳೆಯದಾದರೂ ಕ್ಷೇತ್ರವು ಉತ್ತಮವಾದುದಾಗಬೇಕು, ತಕ್ಕ ಜಲವಸತಿ, ಸೆಜ್ಜೆ, ಗೊಬ್ಬರ ಉಚಿತವಾದ ಬೇಸಾಯ ಇವೆಲ್ಲ ಕೂಡಿರಲ್ಲವೆ ಅಂಕುರವು ಜೋರವಾಗಿ, ಬೆಳೆಯು ಹುಲುಸಾಗುವುದು ? ಪ್ರಕೃತದಲ್ಲಿಯೂ ಹರಿನಾಮಸ್ಮರಣದಿಂದ ಮನೋಭೂಮಿಯು ಶುದ್ಧವಾಗಬೇಕು. ಒಳ್ಳೆಯ ಅಭ್ಯಾಸವೇ ಜಲವಸತಿ, ಸಜ್ಜನ ಸಹವಾಸವೇ ಸೆಜ್ಜೆ, ಶ್ರದ್ಧಾ ಭಕ್ತಿಗಳೇ ಒಳ್ಳೆಯ ಗೊಬ್ಬರ, ಸಮಾಧಿಯೇ ಬೇಸಾಯ, ಆಮೇಲೆಯೇ ಜ್ಞಾನಾಂಕುರವು ಜೋರವಾಗಿ ಹುಲುಸಾದ ಆನಂದದ ಬೆಳೆಯೂ ಕೈಸೇರಿ ಸುಖಾನುಭವವುಂಟಾಗುವುದು.

ಪೂರ್ವಕಾಲದಲ್ಲಿ ಸತ್ಕರ್ಮಾಚರಣೆ, ವಿಶೇಷವಾಗಿ ಯಜ್ಞದಾನಧ್ಯಾನಾನುಷ್ಠಾನ, ಕ್ರೂರತರ ತಪಸ್ಸು ಇತ್ಯಾದಿಗಳೆಲ್ಲ ಮನಶ್ಶುದ್ಧಿಗೆ ಮೂಲ

ಕಾರಣಗಳಾಗಿಸ್ಸುವು. ಈ ಕಲಿಕಾಲದಲ್ಲಿ ಭಗವನ್ನಾಮಸಂಕೀರ್ತನಕ್ಕಿಂತ ಪ್ರಬಲವಾದ ಕಾರಣವು ಬೇರೊಂದಿಲ್ಲ.

"ಕಲೌ ಕಲ್ಮಷಚಿತ್ತಾನಾಂ ಪಾಪದ್ರವ್ಯೋಪಜೀವಿನಾಂ ।
ವಿಧಿ ಕ್ರಿಯಾ ವಿಹೀನಾನಾಂ ಗತಿ ರ್ಗೋವಿಂದ ಕೀರ್ತನಂ ॥"

ಈ ಕಲಿಕಾಲದಲ್ಲಿ ಜನರು ಅಲ್ಪಾಯುಗಳು, ಸಾವಿರಾರು ಬಗೆಯ ವಿಪತ್ತುಗಳಿಂದ ಆವರಿಸಲ್ಪಟ್ಟವರು, ಎಲ್ಲರೂ ಸಾಮಾನ್ಯವಾಗಿ ಮಲಿನಚಿತ್ತರು, ಯಾವುದೋ ಒಂದುಬಗೆಯ ಪಾಪದ್ರವ್ಯದಿಂದಲೇ ಜೀವಿಸುತ್ತಿರುವರು. ವೇದಶಾಸ್ತ್ರವಿಹಿತವಾದ ಸದಾಚಾರಸಂಪತ್ತಿಯನ್ನೂ ನೇಮನಿಷ್ಠೆಗಳನ್ನೂ ಹೊಂದಿರುವುದಿಲ್ಲ, ಸತ್ಕರ್ಮಾಚರಣೆಯೆಂಬುದು ಸುತರಾಂ ಇಲ್ಲ. ನಿಷ್ಕಾಮಕರ್ಮಾಚರಣದಿಂದ ಚಿತ್ತದ ಸ್ಥೂಲಮಲ, ಉಪಾಸನೆಯಿಂದ ಲಿಂಗದೇಹದ ಚಾಂಚಲ್ಯಮಲ, ಜ್ಞಾನದಿಂದ ಕಾರಣಮಲ ಈ ಮೂರೂ ತೊಲಗಿದರೆ ಚಿತ್ತವು ಚಿನ್ಮಯವಾಗುವುದು, ಇದು ಈ ಕಾಲದಲ್ಲಿ ಸಾಧ್ಯವಲ್ಲ, ಆದಕಾರಣ ಈಗಿನವರಿಗೂ ಸದ್ಗತಿಯುಂಟಾಗಬೇಕಾದರೆ ಶ್ರೀ ಗೋವಿಂದನಾಮಸಂಕೀರ್ತನಕ್ಕಿಂತ ಬೇರೊಂದು ಸುಲಭವಾದಸದುಪಾಯವು ಇಲ್ಲವೇ ಇಲ್ಲ. ಭಗವಂತನಲ್ಲಿ ಭಕ್ತಿಯು ಹೆಚ್ಚಬೇಕಾದರೆ ಅರ್ಥಜ್ಞಾನ ಪೂರ್ವಕವಾದ ಶ್ರೀಹರಿನಾಮಸ್ಮರಣವೇ ಮಧುರವಾದ ಸಾಧನ. ಭಗವನ್ನಾಮವನ್ನು ಜಪಿಸುವಾಗ ಆಯಾ ಪದಗಳ ಅರ್ಥವು ಅಂತರಂಗದಲ್ಲಿ ಹೊಳೆದು, ಅದರಿಂದ ಆ ಮಹಾನುಭಾವನ ಕಲ್ಯಾಣಗುಣಗಳು, ಮಹಿಮೆಯೂ, ಅದ್ಭುತ ಸಚ್ಚರಿತ್ರೆಯೂ, ಸೌಲಭ್ಯವೂ, ದಯಾಪ್ರಭಾವವೂ, ಭಕ್ತವಾತ್ಸಲ್ಯವೂ ನೆನಪಿಗೆ ಬರುತ್ತಿರುವಾಗ ಮನುಸ್ಸು ಕರಗಿ ದ್ರವವಾಗಿ, ಶರೀರದಲ್ಲಿ ರೋಮಾಂಚವುಂಟಾಗಿ, ಕಣ್ಣುಗಳಲ್ಲಿ ಆನಂದಬಾಷ್ಪವು ಉದುರುತ್ತಾ ಆ ಶ್ರೀಮನ್ನಾರಾಯಣನಲ್ಲಿಯೇ ನೆಲೆಗೊಂಡ ಪ್ರೇಮಭರದಿಂದ ಗದ್ಗದಸ್ವರವುಂಟಾಗಿ, ನಾಲಗೆಯು ತಾನಾಗಿಯೇ ಹೇಗೋ ನಾಮಾಮೃತದ ಸವಿಯನ್ನು ಹೀರುತ್ತಾ ಪರವಶತೆಯುಂಟಾಗೋಣವೇ ಭಕ್ತಿ, ಈ ವಿಧವಾದ ಭಕ್ತಿಯು ಅಭ್ಯಾಸಪಾಟವದಿಂದ ಬಲಿತು ಧ್ಯಾನಯೋಗದಲ್ಲಿ ಹೊಕ್ಕು. ಸಮಾಧಿಯಲ್ಲಿ ಪರಿಪಕ್ವವಾಗುತ್ತ ಬಂದರೆ ಆನಂದಫಲಾವಾಪ್ತಿಯೂ ತಾನಾಗಿ ಲಭಿಸುವುದು. ಆದುದರಿಂದಲೇ ಶ್ರೀಹರಿನಾಮ ಪಾರಾಯಣಕ್ಕೆ

ಪ್ರಾಶಸ್ತ್ಯವುಂಟಾಗಿರುವುದು. ಈ ಅರ್ಥವನ್ನು ಶ್ರೀಮದಾಚಾರ್ಯರು ಮುಂದೆ ವ್ಯಕ್ತಗೊಳಿಸಿದಾರೆ.

ಮ॥ ರಾ॥ ಸುಬ್ಬರಾವ್ ಗೋಪಾಲ ಉಭಯಕರ ಇವರು ತಮ್ಮ ಅಣ್ಣಂದಿರು ಲೋಕೋಪಕಾರ ಬುದ್ಧಿಯಿಂದ ಶ್ರೀ ವಿಷ್ಣುಸಹಸ್ರನಾಮ ಗಳಿಗೆ ವರ್ಣಾನುಕ್ರಮವಾಗಿ ಅರ್ಥವನ್ನು ಬರೆದು ಇಟ್ಟು ಇದ್ದುದನ್ನು ದಿವಂಗತರಾದ ಅವರ ಜ್ಞಾಪಕಾರ್ಥವಾಗಿ ಅಚ್ಚು ಮಾಡಿಸಬೇಕೆಂದು, ಶೋಧಿಸಿ ಕೊಡುವಂತೆ ಕೊಟ್ಟಾಗ್ಯು, ಆ ಬರವಣಿಗೆಯು ನಾಮಾವಳಿಯ ನ್ನು ಅನುಸರಿಸದೆಯೂ, ಶ್ರೀ ಶಂಕರಾಚಾರ್ಯರವರ ಭಾಷ್ಯದಲ್ಲಿನ ಯಾ ವದರ್ಥವನ್ನೂ ನಿರೂಪಿಸತಕ್ಕುದಾಗಿ ಇಲ್ಲದ್ದರಿಂದಲೂ, ಅಲ್ಲದೆ ಕನ್ನಡ ದೇಶದ ಭಾಷಾಶೈಲಿಯನ್ನು ಅನುಸರಿಸಿ ಇಲ್ಲವುದರಿಂದಲೂ ಹೊಸದಾಗಿ ಭಾಷ್ಯವನ್ನು ಅನುಸರಿಸಿ ನನ್ನ ಶಕ್ತ್ಯನುಸಾರ ವಿವರಿಸಿದೇನೆ. ಭಾಗ ವತ ಶಿರೋಮಣಿಗಳಿಗೆ ಸ್ವಲ್ಪವುಟ್ಟಿಗಾದರೂ ಸಹಾಯವಾದರೆ ನಾನು ಕೃತಜ್ಞನೂ, ಕೃತಾರ್ಥನೂ ಆಗುವುದಲ್ಲದೆ, ಭಕ್ತವತ್ಸಲನೂ ಭವ ರೋಗವೈದ್ಯನೂ, ಅಶರಣ್ಯಶರಣ್ಯನೂ ಆದ ಶ್ರೀಹರಿಯು ಸುಪ್ರೀ ತನಾಗುವನು ಎಂದು ಭಕ್ತಾಗ್ರೇಸರರ ಪಾದರಜಸ್ಸನ್ನು ಶಿರಸಾವಹಿ ಸುತ್ತಾ ಬದ್ಧಾಂಜಲಿಪುಟನಾಗಿ ಪ್ರಾರ್ಥಿಸುವ,

ಪ್ರ ಭಾ ಕ ರ.

ಕಲ್ಯಾಣಮೂರ್ತೇ ಶ್ರುತಿಗೀತಕೀರ್ತೇ ಹೃತಾಮುರಾರ್ತೇ ನತಕಾಮಪೂರ್ತೇ।
ಹರೇ ಮುರಾರೇ ದುರಿತಾರಿಶೌರೇ ನಾರಾಯಣಸ್ತ್ವಂ ಶರಣಂಪ್ರಪನ್ನಃ ॥

---

ಪುಸ್ತಕ ದೊರೆಯುವ ಸ್ಥಳ.—

ಡಿ. ಲಕ್ಷ್ಮೀನರಸಿಂಹಶಾಸ್ತ್ರೀ

"ಶ್ರೀ ಶಾರದಾ" ಆಫೀಸ್, ಸೀಗೆಬೇಲಿ-ಬೆಂಗಳೂರು ಸಿಟಿ.

॥ ಶ್ರೀಃ ॥

ಓಂ ನಮೋ ನಾರಾಯಣಾಯ.

## ... ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರಂ ...

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ ॥

ವ್ಯಾಸಂ ವಸಿಷ್ಠನಪ್ತಾರಂ ಶಕ್ತೇಃ ಪೌತ್ರ ಮಕಲ್ಮಷಮ್ ।
ಪರಾಶರಾತ್ಮಜಂ ವಂದೇ ಶುಕತಾತಂ ತಪೋನಿಧಿಮ್ ॥೧॥
ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ ।
ನಮೋ ವೈ ಬ್ರಹ್ಮನಿಧಯೇ ವಾಸಿಷ್ಠಾಯ ನಮೋನಮಃ ॥೨॥
ಅವಿಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ ।
ಸದೈಕರೂಪ ರೂಪಾಯ ವಿಷ್ಣವೇ ಸರ್ವಜಿಷ್ಣವೇ ॥೩
ಯಸ್ಯ ಸ್ಮರಣಮಾತ್ರೇಣ ಜನ್ಮ ಸಂಸಾರ ಬಂಧನಾತ್ ।
ವಿಮುಚ್ಯತೆ ನಮ ಸ್ತಸ್ಮೈ ವಿಷ್ಣವೆ ಪ್ರಭವಿಷ್ಣವೇ ॥೪॥

॥ ಓಂ ನಮೋ ವಿಷ್ಣವೇ ಪ್ರಭವಿಷ್ಣವೇ ॥

---

ಸಹಸ್ರಮೂರ್ತೇಃ ಪುರುಷೋತ್ತಮಸ್ಯ । ಸಹಸ್ರನೇತ್ರಾನನಪಾದಬಾಹೋಃ ॥
ಸಹಸ್ರನಾಮ್ನಾಂ ಸ್ತವನಂ ಪ್ರಶಸ್ತಂ । ನಿರುಚ್ಯತೆ ಜನ್ಮಜರಾದಿಶಾಂತ್ಯೈ ॥

ಆವನ ಗುಣಮಣಿ ಜಾಲವ । ನಾವಗಮುಂ ತಾಂ ಸಹಸ್ರ ನಾಮಂ ನುತಿಕುಂ ॥
ಆ ವಿಷ್ಣುನಾಮ ಸಾಸಿರ । ಕೀವಿಧದಿಂ ವಿವೃತಿಗೈವೆ ನಾ ಹರಿಕೃಪೆಯಿಂ ॥

ವಶಿಷ್ಠಮುನಿ ಪ್ರಪೌತ್ರನು, ಶಕ್ತಿಮುನಿ ಪೌತ್ರನು, ಪರಾಶರಪುತ್ರನು, ಶುಕಮುನಿ ಪಿತನೂ, ತಪೋನಿಧಿಯೂ ಆಗಿ, ಪರಿಶುದ್ಧಾತ್ಮನೆನಿಸಿರುವ ವ್ಯಾಸಮುನಿಯನ್ನು ವಂದಿಸುವೆನು೧. ವ್ಯಾಸರೂಪದಿಂದಿದ್ದರೂ ಪರಮಾರ್ಥದಲ್ಲಿ ವಿಷ್ಣುವೇ ಆಗಿ, ಯಥಾರ್ಥವಾಗಿ ವಿಷ್ಣುವೇ ಆಗಿದ್ದರೂ ವ್ಯಾಸರೂಪನೆನಿಸಿ, ವೇದಗಳಿಗೆ ಗಣಿಯಾಗಿ, ವಸಿಷ್ಠಪೌತ್ರನೆನಿಸಿರುವವೇದವ್ಯಾಸಮುನಿಗೆ ಪುನಃಪುನಃ ವಂದನೆ ೨. ವಿಕಾರಶೂನ್ಯನು, ನಿರ್ಮಲನು, ನಾಶರಹಿತನು, ಪರಮಪುರುಷನು, ಯಾವಾಗಲೂ ಏಕರೂಪನು, ಸರ್ವವ್ಯಾಪಕನು, ಸರ್ವವನ್ನು ವಶಮಾಡಿಕೊಂಡಿರುವವನೂ ಆಗಿರುವ ಶ್ರೀ ಪರಮಾತ್ಮನಿಗೆ ವಂದನೆ ೩. ಯಾವನ ಸ್ಮರಣಮಾತ್ರದಿಂದ ಮಾನವನು ಜನನ ಮರಣಾದಿ ರೂಪವಾದ ಸಂಸಾರದಕಟ್ಟಿನಿಂದ ಬಿಡುಗಡೆಯಾಗುವನೋ ಅಂತಹ ಸರ್ವಶಕ್ತನಾದ ಶ್ರೀಹರಿಗೆ ವಂದನೆ. ಮಹಾಸ್ವಾಮಿಯಾದ ಆ ಹರಿಗೆ ಪುನಃ ವಂದನೆ೪.

ಶ್ರೀ ವೈಶಂಪಾಯನಉವಾಚ.

ಶ್ರುತ್ವಾ ಧರ್ಮಾ ನಶೇಷೇಣ ಪಾವನಾನಿ ಚ ಸರ್ವಶಃ ।
ಯುಧಿಷ್ಠಿರ ಶ್ಶಾಂತನವಂ ಪುನರೇ ವಾಭ್ಯಭಾಷತ॥ ॥೧॥

ಯುಧಿಷ್ಠಿರ ಉವಾಚ.

ಕಿಮೇಕಂ ದೈವತಂ ಲೋಕೇ, ಕಿಂ ವಾಪ್ಯೇಕಂ ಪರಾಯಣಮ್ ।
ಸ್ತುವಂತಃ ಕಂ, ಕಮರ್ಚಂತಃ ಪ್ರಾಪ್ನುಯು ರ್ಮಾನವಾಶ್ಶುಭಮ್ ॥ ॥೨॥

---

ಹರಿಃ ಓಂ.

ವೈಶಂಪಾಯನ ಮುನಿಯು ಜನಮೇಜಯನನ್ನು ಕುರಿತು ಇಂತೆಂದನು. ಎಲೈ ಅರಸೇ ಕೇಳು — ಕುರುಕ್ಷೇತ್ರದಲ್ಲಿ ಯುದ್ಧವು ನೆರವೇರಿತು, ಬಳಿಕ ಉತ್ತರಾಯಣದಲ್ಲಿ ಮರಣವನ್ನು ಬಯಸಿ ಶರತಲ್ಪದಮೇಲೆ ಮಲಗಿ, ವಾಸುದೇವನ ಚರಣಾರವಿಂದಗಳಲ್ಲಿ ನೆಲೆಗೊಂಡ ಮನಸ್ಸುಳ್ಳವನಾಗಿ, ಸಮಯವನ್ನು ನಿರೀಕ್ಷಿಸುತ್ತಿರುವ ಭೀಷ್ಮಾಚಾರ್ಯನಿಂದ ಧರ್ಮರಾಯನು ಇಹಪರ ಸುಖಗಳಿಗೆ ಸಾಧಕಗಳಾಗಿಯೂ, ವೇದನಿಹಿತಗಳನಿಯೂ ಇರುವ ಸಕಲ ಧರ್ಮಗಳನ್ನೂ, ಲೋಕಪವಿತ್ರಗಳೆನಿಸಿದ ಧರ್ಮರಹಸ್ಯಗಳನ್ನೂ, ಚೆನ್ನಾಗಿ ಕೇಳಿ ತಿಳಿದುಕೊಂಡನು. ಆದರೂ "ಸಕಲ ಪುರುಷಾರ್ಥಸಾಧಕವಾಗಿರಬೇಕು, ಅಲ್ಪಪ್ರಯಾಸದಿಂದ ಲಭಿಸಬೇಕು, ಅನಲ್ಪಫಲಪ್ರದವಾಗಿರಬೇಕು, ಸುಲಭವಾಗಿ ಕೈಗೂಡಬೇಕು, ಅಂಥದು ಯಾವುದಾದರೂ ಇದ್ದರೆ ಅದನ್ನು ತಿಳಿಯಹೇಳು" ಎಂದು ಆ ಶಂತನು ಪುತ್ರನನ್ನು ಕುರಿತು, ಪುನಃ ಕೇಳುತ್ತಾನೆ. ಧರ್ಮರಾಯನು — ಎಲೈ ಪಿತಾಮಹನೆ ?

೧ ಸಮಸ್ತ ವಿದ್ಯೆಗಳಿಂದಲೂ ತಿಳಿಯಬರುವ ಒಬ್ಬನೇ ದೇವರುಯಾರು?

೨ ಚರಾಚರಾತ್ಮಕವಾದ ಪ್ರಪಂಚಕ್ಕೆಲ್ಲ ಆಶ್ರಯವಾಗಿರುವ ಒಂದೇ ವಸ್ತು ಯಾವುದು ?

೩ ಯಾರನ್ನು ಕೊಂಡಾಡುತ್ತಿದ್ದರೆ ಮಾನವರುಶುಭವನ್ನು ಪಡೆಯುತ್ತಾರೆ?

೪ ಮತ್ತಾರನ್ನು ಅರ್ಚಿಸುತ್ತಿದ್ದರೆ ಮಂಗಳವನ್ನು ಪಡೆಯುವರು?

೫ ಈ ಹಿಂದೆ ಹೇಳಿದ ಧರ್ಮಗಳೊಳಗೆ - ಯಾವ ಧರ್ಮವು ಸರ್ವ

ಕೋಧರ್ಮ ಸ್ಸರ್ವಧರ್ಮಾಣಾಂ ಭವತಃ ಪರಮೋ ಮತಃ ।
ಕಿಂ ಜಪನ್ಮುಚ್ಯತೆ ಜಂತು ರ್ಜನ್ಮ ಸಂಸಾರ ಬಂಧನಾತ್ ॥೩॥

ಶ್ರೀ ಭೀಷ್ಮ ಉವಾಚ.

ಜಗತ್ಪ್ರಭುಂ ದೇವದೇವ ಮನಂತಂ ಪುರುಷೋತ್ತಮಮ್ ।
ಸ್ತುವ ನ್ನಾಮ ಸಹಸ್ರೇಣ ಪುರುಷ ಸ್ಸತತೋತ್ಥಿತಃ ॥೪॥
ತಮೇವಚಾರ್ಚಯ ನ್ನಿತ್ಯಂ ಭಕ್ತ್ಯಾ ಪುರುಷಮವ್ಯಯಮ್ ।
ಧ್ಯಾಯ ಸ್ತುವ ನ್ನಮಸ್ಯಂಶ್ಚ ಯಜಮಾನ ಸ್ತಮೇವಚ ॥ ॥೫॥

---

ಧರ್ಮಗಳಿಗಿಂತಲೂ ಮೇಲಾದುದು ಎಂದು ನಿನಗೆ ಸಮ್ಮತವಾಗಿದೆ?

೬ ಇಲ್ಲವೆ ಜಪಿಸಬೇಕಾಗಿರುವ ಯಾವ ಜಪವನ್ನು ಗಟ್ಟಿಯಾಗಿ ಅಥವಾ ಮೆಲ್ಲಗೆ ಮನಸ್ಸಿನಲ್ಲಿಯೋ ಮನುಜನು ಜಪಿಸಿದರೆ ಇತರ ಫಲಗಳನ್ನೂ ಹೊಂದುವುದಲ್ಲದೆ ಜನ್ಮ ಅಜ್ಞಾನ ಇವುಗಳ ಕಟ್ಟಿನಿಂದಲೂ ಬಿಡುಗಡೆಯನ್ನು ಹೊಂದಬಲ್ಲನು?

ಇದನ್ನು ನನಗೆ ಅನುಗ್ರಹಿಸು ಎಂದು ಆರು ಪ್ರಶ್ನೆಗಳನ್ನು ಕೇಳಿದನು.

ಅದಕ್ಕೆ ಒಳಗಿನ ಮತ್ತು ಹೊರಗಿನ ಕಾಮಾದಿ ಶತ್ರುಗಳಿಗೆಲ್ಲ ಭಯಂಕರನೂ ಮೋಕ್ಷಧರ್ಮವೇ ಮೊದಲಾದವುಗಳನ್ನೆಲ್ಲಾ ವಿವರಿಸಿದವನೂ ಆಗಿ ಸರ್ವಜ್ಞನೆನಿಸಿದ ಭೀಷ್ಮನು ಇಂತೆಂದನು:— .

ಭೀಷ್ಮಾಚಾರ್ಯನು ಹೇಳುತ್ತಾನೆ.

೬ನೆಯ ಪ್ರಶ್ನೆಗೆ ಉತ್ತರ

ಅಯ್ಯಾ ಧರ್ಮರಾಜ ! ಕೇಳು— ಚರಾಚರಾತ್ಮಕವಾದ ಜಗತ್ತಿಗೆಲ್ಲ ಸ್ವಾಮಿಯಾಗಿ, ಬ್ರಹ್ಮಾದಿ ದೇವತೆಗಳಿಗೆಲ್ಲ ದೇವನೆನಿಸಿ, ದೇಶದಿಂದಲಾಗಲಿ, ಕಾಲದಿಂದಲಾಗಲಿ, ವಸ್ತುವಿನಿಂದಲಾಗಲಿ ಅಳೆಯಲು ಒಳಗಾಗದೆ ಇರುವ ಪುರುಷೋತ್ತಮ (ಕ್ಷರಾಕ್ಷರಗಳಿಗಿಂತಲುತ್ಕೃಷ್ಟ)ನ ಸಹಸ್ರ ನಾಮಗಳಿಂದ ಗುಣಸಂಕೀರ್ತನೆ (ಜಪ)ವನ್ನು ಶ್ರದ್ಧಾ ಭಕ್ತಿಪೂರ್ವಕವಾಗಿ ಆಚರಿಸುತ್ತಿರುವವನೇ ಜನನ ಮರಣ ರೂಪವಾದ ಸಂಸಾರದ ಕಟ್ಟಿನಿಂದ ಬಿಡುಗಡೆಯನ್ನು ಹೊಂದುವನು. ॥೪॥

೪ನೆಯ ಪ್ರಶ್ನೆಗೆ ಉತ್ತರ:—

ಅಯ್ಯಾ ಯುಧಿಷ್ಠಿರಾ!- ವಿನಾಶ ವಿಕಾರಗಳಿಲ್ಲದ ಆ ಪುರುಷೋತ್ತಮ

ಅನಾದಿನಿಧನಂ ವಿಷ್ಣುಂ ಸರ್ವಲೋಕಮಹೇಶ್ವರಂ ।
ಲೋಕಾಧ್ಯಕ್ಷಂ ಸ್ತುವನ್ನಿತ್ಯಂ ಸರ್ವದುಃಖಾತಿಗೋಭವೇತ್ ॥ ೬
ಬ್ರಹ್ಮಣ್ಯಂ ಸರ್ವಧರ್ಮಜ್ಞಂ ಲೋಕಾನಾಂ ಕೀರ್ತಿವರ್ಧನಮ್ ।
ಲೋಕನಾಥಂ ಮಹದ್ಭೂತಂ ಸರ್ವಭೂತಭವೋದ್ಭವಮ್ ॥ ೭

---

ನನ್ನೇ ಅಭ್ಯಂತರ ಸಾಮಗ್ರಿಯಿಂದಲಾಗಲೀ, ಬಾಹ್ಯಸಾಧನದಿಂದಲೇ ಆಗಲೀ, ಯಾವಾಗಲೂ ಭಕ್ತಿಪೂರ್ವಕವಾಗಿ ಅರ್ಚಿಸುತ್ತಲೂ, ಮನಸ್ಸಿನಲ್ಲಿ ಧ್ಯಾನಿಸುತ್ತಲೂ, ವಾಕ್ಕಿನಿಂದ ಸ್ತುತಿಸುತ್ತಲೂ,ಸಾಷ್ಟಾಂಗವಾಗಿ ನಮಸ್ಕರಿಸುತ್ತಲೂ ಇದ್ದರೆ, ಸರ್ವ ದುಃಖಗಳನ್ನೂ ಅತಿಕ್ರಮಿಸುವ ಮಂಗಳವನ್ನು ಪಡೆಯುವನು. ॥೫॥

ಒನೆಯ ಪ್ರಶ್ನೆಗೆ ಉತ್ತರ.

ಅಯ್ಯಾ ಕೌಂತೇಯಾ—ಇದಾನೆ, ಬೆಳೆಯುವನು, ಹೊರವಾಗುವನು, ಬಡವಾಗುತ್ತಾನೆ, ಕಳೆಗುಂದುತ್ತಾನೆ, ನಾಶವಾಗುವನು (ಅಸ್ತಿ, ಜಾಯತೆ,ವರ್ಧತೆ,ವಿಪರಿಣಮತೆ, ಅಪಕ್ಷೀಯತೆ, ವಿನಶ್ಯತಿ)ಎಂಬ ಆರುಬಗೆಯ ಭಾವವಿಕಾರಗಳಿಗೂ ಒಳಗಾಗದೆ, ಸರ್ವವ್ಯಾಪಕನಾಗಿ, ಬ್ರಹ್ಮನೇಮೊದಲಾದವರಿಗೆಲ್ಲ ಈಶ್ವರನೆನಿಸಿ, ಸಮಸ್ತವನ್ನೂ ಕಣ್ಣೆದುರಿಗಿರುವಂತೆ ತಿಳಿದುಕೊಳ್ಳುತ್ತಿರುವ ಆ ಪುರುಷೋತ್ತಮನನ್ನೇ ಯಾವಾಗಲೂ ಸ್ತುತಿಸುತ್ತಿದ್ದರೆ, ಆಧ್ಯಾತ್ಮಿಕ, ಆಧಿದೈವಿಕ, ಆದಿಭೌತಿಕ, ದುಃಖಗಳನ್ನು ಎಂದರೆ ತಾನಾಗಿ ತಂದುಕೊಂಡ, ದೈವವಶಾತ್ ಉಂಟಾದ, ಭೂತಗಳಿಂದ ಸಂಭವಿಸಿದ ತ್ರಿವಿಧತಾಪದುಃಖಗಳನ್ನೆಲ್ಲ ನೀಗಿಸುಬವನ್ನು ಹೊಂದುವನು. ॥೬॥

ಓ ಧರ್ಮಪುತ್ರಾ! ಆ ಪುರುಷೋತ್ತಮನಾದ ಶ್ರೀಹರಿಯು ಸಾಮಾನ್ಯನಲ್ಲ; ಆತನೇ ಸೃಷ್ಟಿಕರ್ತನಾದ ಬ್ರಹ್ಮನಿಗೂ, ತಪಸ್ಸಿಗೂ,ವೇದಕ್ಕೂ ಹಿತನು. ಸರ್ವ ಧರ್ಮಗಳನ್ನೂ ಬಲ್ಲವನು, ತನ್ನ ಭಕ್ತರಿಗೆ ಹೆಸರುವಾಸಿಯನ್ನುಂಟುಮಾಡುವವನು, ಎಲ್ಲರಿಂದಲೂ ಪ್ರಾರ್ಥಿಸಲ್ಪಡುವವನು, ದುಷ್ಟರನ್ನು ಶಿಕ್ಷಿಸುವವನು, ಶಿಷ್ಟರನ್ನು ಏಳಿಗೆಗೆ ತರುವವನು, ಸರ್ವಲೋಕನಿಯಾಮಕನು, ಎಲ್ಲರಿಗಿಂತಲೂ ದೊಡ್ಡವನು, ಸತ್ಯಸ್ವರೂಪನು, ಸರ್ವಭೂತಗಳ ಉತ್ಪತ್ತಿಗೂ ಮೂಲಭೂತನು, ಅವನೇ ಪರಬ್ರಹ್ಮನು ಎಂದು ತಿಳಿ. ॥೭॥

ವಿಷವೋ ಸರ್ವಧರ್ಮಾಣಾಂ ಧರ್ಮೋಽಧಿಕತಮೋಮತಃ ।
ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈ ರರ್ಚೇನ್ನರಸ್ಸದಾ ॥೮॥

ಆನೆಯ ಪ್ರಶ್ನೆಗೆ ಉತ್ತರ.

ಅಪ್ಪಾ ಧರ್ಮಪುತ್ರಾ! ಆ ಶ್ರೀಹರಿಯಲ್ಲಿಯೇ ಪರಮ ಭಕ್ತಿಯನ್ನಿಟ್ಟ ಹೃದಯ ಕಮಲದಲ್ಲಿ ಪ್ರಕಾಶಿಸುತ್ತಿರುವ ಪುಂಡರೀಕಾಕ್ಷನಾದ ಆ ಪರ ವಾಸುದೇವನ ಗುಣಸಂಕೀರ್ತನ ರೂಪವಾದ ಸ್ತುತಿಗಳಿಂದ ಯಾವಾಗಲೂ ಆದರ ಪೂರ್ವಕವಾಗಿ ನರನು ಅರ್ಚಿಸುತ್ತಿರಬೇಕು. ಎಂಬುದೇ ಸರ್ವ ವೇದ ವಿಹಿತವೆನಿಸಿ, ಎಲ್ಲ ಧರ್ಮಗಳಿಗಿಂತಲೂ ದೊಡ್ಡದೂ ಆಗಿರುವ ಧರ್ಮವೆಂದು ನನಗೆ ಸಂಪೂರ್ಣ ಸಮ್ಮತವಾಗಿದೆ.

ಓ ಧರ್ಮನಂದನಾ! ಆ ಮಹಾನುಭಾವನ ಸ್ತುತಿಯೇ ಅಷ್ಟು ದೊಡ್ಡದಾಗಿರಲು ಕಾರಣವೇನು ಎಂಬೆಯೋ? ಕೇಳು—

ಯಾರಿಗೂ ಹಿಂಸೆಯಿಲ್ಲ, ಮತ್ತೊಬ್ಬರ ಸಹಾಯವು ಬೇಕಿಲ್ಲ, ದ್ರವ್ಯಾಪೇಕ್ಷೆಯಿಲ್ಲ, ಇಂತಹ ದೇಶವಾಗಬೇಕು, ಇಂಥ ಕಾಲವೇ ಬೇಕು, ಈ ನೇಮವಿಧಿವಿರಬೇಕು ಎಂಬ ಕಟ್ಟುಗಳಿಲ್ಲ, ಇವೇ ಆಧಿಕ್ಯಕ್ಕೆ ಕಾರಣ.

ಧ್ಯಾಯನ್ ಕೃತೇಯಜನ್ ಯಜ್ಞೈಃ ತ್ರೇತಾಯಾಂ ದ್ವಾಪರೇಽರ್ಚಯನ್ ।
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಂ ॥

ಈ ಸಂದರ್ಭದಲ್ಲಿ ಇನ್ನೊಂದು ರಹಸ್ಯವುಂಟು ಅದನ್ನೂ ಕೇಳು- ಕೃತಯುಗದಲ್ಲಿ ಧ್ಯಾನದಿಂದಲೂ, ತ್ರೇತಾಯುಗದಲ್ಲಿ ಯಾಗಗಳಿಂದಲೂ, ದ್ವಾಪರದಲ್ಲಿ ಅರ್ಚನೆಯಿಂದಲೂ ಯಾವ ಫಲವನ್ನು ಪಡೆಯುತ್ತಿದ್ದರೋ ಈ ಕಲಿಯುಗದಲ್ಲಿ ಆ ಕೇಶವ ಮೂರ್ತಿಯ ನಾಮ ಸಂಕೀರ್ತನವನ್ನು ಮಾಡುವುದರಿಂದಲೇ ಆ ಎಲ್ಲ ಫಲವನ್ನೂ ಪಡೆಯುವರು. (ವಿಷ್ಣುಪುರಾಣ)

ಜಪ್ಯೇ ನೈವತು ಸಂಸಿಧ್ಯೇತ್ ಬ್ರಾಹ್ಮಣೋ ನಾ ತ್ರಸಂಶಯಃ ।
ಕುರ್ಯಾ ದನ್ಯ ನ್ನವಾ ಕುರ್ಯಾತ್ ಮೈತ್ರೋ ಬ್ರಾಹ್ಮಣ ಉಚ್ಯತೇ ॥

ಮನುಜನು—ಇತರ ಕರ್ಮಗಳನ್ನು ಮಾಡಲಿ ಅಥವಾ ಬಿಡಲಿ ಶ್ರೀ ಹರಿನಾಮ ಜಪದಿಂದಲೇ ಪರಿಶುದ್ಧನಾಗಿ ಬ್ರಾಹ್ಮಣೋತ್ತಮನೆನಿಸುವನು. (ಮನು)

ಪರಮಂ ಯೋ ಮಹತ್ತೇಜಃ ಪರಮಂ ಯೋ ಮಹತ್ತಪಃ ।
ಪರಮಂ ಯೋ ಮಹದ್ಬ್ರಹ್ಮ ಪರಮಂ ಯಃ ಪರಾಯಣಮ್ ॥೯॥
ಪವಿತ್ರಾಣಾಂ ಪವಿತ್ರಂ ಯೊ ಮಂಗಳಾನಾಂ ಚ ಮಂಗಳಂ ।
ದೈವತಂ ದೇವತಾನಾಂ ಚ ಭೂತಾನಾಂ ಯೋ ವ್ಯಯಃಪಿತಾ ॥೧೦॥

---

ಜಪಸ್ತು ಸರ್ವಧರ್ಮೇಭ್ಯಃ ಪರಮೊ ಧರ್ಮ ಉಚ್ಯತ ।
ಅಹಿಂಸಯಾಚ ಭೂತಾನಾಂ ಜಪಯಜ್ಞಃ ಪ್ರವರ್ತತೆ ॥

ಯಾವ ಪ್ರಾಣಿಗೂ ಹಿಂಸೆಯನ್ನುಂಟುಮಾಡದಿರುವ ಶ್ರೀ ಹರಿನಾಮ ಜಪ ಯಜ್ಞವೇ ಸರ್ವ ಧರ್ಮಗಳಿಗಿಂತಲೂ ಉತ್ತಮವಾದ ಧರ್ಮವಾಗಿರುವುದು (ಭಾ) "ಯಜ್ಞಾನಾಂ ಜಪ ಯಜ್ಞೋಸ್ಮಿ" ಯಜ್ಞಗಳೊಳಗೆ ನಾನು ಜಪಯಜ್ಞವಾಗಿದೇನೆ ಎಂದು ಗೀತೆ. - ಇದನ್ನೆಲ್ಲ ಯೋಚಿಸಿಯೇ ಅಲ್ಲವೇ ಎಲ್ಲಧರ್ಮಗಳೊಳಗೂ ಈ ಧರ್ಮವೇ ಅಧಿಕತರವು ಎಂದು ಹಿಂದೆಯೇ ಹೇಳಿದೆನು. ॥೮॥

## ೨ನೆಯ ಪ್ರಶ್ನೆಗೆ ಉತ್ತರ.

ಎಲೈ ಧರ್ಮರಾಜ ! ಸೂರ್ಯ ಚಂದ್ರ ನಕ್ಷತ್ರ ಮುಂತಾದವುಗಳನ್ನೂ ಬೆಳಗಿಸುತ್ತ, ವಾಯುವು ಹೆದರಿ ಬೀಸುವಂತೆಯೂ, ಸೂರ್ಯನು ಅಂಜುತ ಉರಿಸುವಂತೆಯೂ, ಅಗ್ನೀಂದ್ರ ಯಮರೂ ಭಯಪಟ್ಟು ಓಡುವಂತೆಯೂ ಮಾಡುತ್ತ, ಪರಮೈಶ್ವರ್ಯಸಂಪನ್ನನಾಗಿ ಸರ್ವಾಂತರ್ಯಾಮಿಯೆನಿಸಿ ಸರ್ವಾಧಿಕಭಾವದಿಂದ ಬೆಳಗುತ್ತಿರುವುದಾವುದೋ ಅದೇ ದೇವತೆಗಳಿಗೆಲ್ಲ ದೇವರು, ಪರಮ ತೇಜಸ್ಸು, ಪರಮ ತಪಸ್ಸು, ಪರಬ್ರಹ್ಮ, ಮತ್ತು ಪರಮಾಶ್ರಯವೆನಿಸಿರುವುದೂ ಅದೇ ಆಗಿರುವುದು. ॥೯॥

## ೧ನೆಯ ಪ್ರಶ್ನೆಗೆ ಉತ್ತರ.

ಅಯ್ಯಾ ಧರ್ಮರಜ ! ಆ ಪರಮ ಪುರುಷನು - ತನ್ನ ಧ್ಯಾನ, ದರ್ಶನ, ನಾಮ ಸಂಕೀರ್ತನ, ಸ್ತುತಿ, ಪೂಜೆ, ಸ್ಮರಣೆ, ನಮಸ್ಕಾರ ಇವುಗಳಿಂದ ಸಕಲ ಪಾಪಗಳನ್ನೂ ಸಂಪೂರ್ಣವಾಗಿ ನಾಶಗೊಳಿಸಿ, ಪುರುಷನನ್ನು ಪರಮ ಪವಿತ್ರನನ್ನಾಗಿ ಮಾಡಿ, ಸಂಸಾರ ಬಂಧಕ್ಕೆ ಕಾರಣವಾಗಿರುವ ಪುಣ್ಯಾಪುಣ್ಯ ರೂಪವಾದ ಕರ್ಮವನ್ನೂ, ಅದಕ್ಕೆ ಕಾರಣವಾದ ಸರ್ವಾಜ್ಞಾನವನ್ನೂ ನಾಶಗೊಳಿಸುತ್ತಾನೆ. ಆದುದರಿಂದಲೇ ಲೋಕದಲ್ಲಿರುವ

ಸಮಸ್ತ ಪವಿತ್ರ ವಸ್ತುಗಳಿಗಿಂತಲೂ ಆತನು ಪವಿತ್ರತರ, ಸರ್ವಮಂಗಳಗಳಿಗಿಂತಲೂ ಉತ್ತಮವಾದ ಮಂಗಳ ಪದಾರ್ಥ, ದೇವರುಗಳಿಗೆಲ್ಲ ದೇವರು. ಸಕಲ ಭೂತಗಳಿಗೂ ನಾಶರಹಿತನಾದ ತಂದೆ ಎನಿಸಿ ಸರ್ವಸಿದ್ಧಾಮಕನಾಗಿವಾನೆ. ||೧೦|| ಆತನ ಧ್ಯಾನವು ಎಂದಿಗೂ ವ್ಯರ್ಥವಾಗತಕ್ಕದಲ್ಲ,

ರೂಪ ಮಾರೋಗ್ಯ ಮರ್ಥಾಂಶ್ಚ ಭೋಗಾಂ ಶ್ಚೈವಾನುಷಂಗಿಕಾನ್ |
ದದಾತಿ ಧ್ಯಾಯತೋ ನಿತ್ಯ ಮಪವರ್ಗ ಪ್ರದೋಹರಿಃ ||

ಆರೋಗ್ಯ, ಐಶ್ವರ್ಯ, ಐಹಿಕ ಸಮಸ್ತ ಭೋಗ ಇವುಗಳನ್ನೆಲ್ಲ ಕೊಡುವುದರ ಮೂಲಕ ಮುಕ್ತಿಯನ್ನೂ ಅನುಗೊಳಿಸುತ್ತದೆ. ಸರ್ವ ಕ್ಲೇಶಗಳನ್ನೂ ಪರಿಹರಿಸುವ ಅಚಿಂತ್ಯ ಮಹಿಮನಾದ ಆ ಶ್ರೀಹರಿಯ ನಾಮವೊಂದನ್ನು ಬಿಟ್ಟರೆ ಬೇರೆ ಚಿಂತಿಸತಕ್ಕ ವಸ್ತುವೇ ಇಲ್ಲ.

ಧ್ಯಾಯೇ ನ್ನಾರಾಯಣಂ ದೇವಂ ಸ್ನಾನಾದಿಷುಚ ಕರ್ಮಸು |
ಪ್ರಾಯಶ್ಚಿತ್ತಂಹಿ ಸರ್ವಸ್ಯ ದುಷ್ಕೃತಸ್ಯೇತಿ ವೈಶ್ರುತಿಃ ||

ಸ್ನಾನಾದಿ ಸಕಲ ಕರ್ಮಗಳ ಆರಂಭದಲ್ಲಿಯೂ ಶ್ರೀಮನ್ನಾರಾಯಣನನ್ನೇ ಧ್ಯಾನಿಸಬೇಕು. ಈ ನಾಮಸ್ಮರಣೆಯೇ ಸಕಲ ಮಂತ್ರಗಳಿಗೂ ಪ್ರಾಯಶ್ಚಿತ್ತವಾಗಿರುವುದು. ಅತಿ ಪಾತಕದಿಂದ ಕೂಡಿದವನಾದರೂ ಒಂದು ನಿಮಿಷ ಮಾತ್ರ ಭಕ್ತಿ ಪೂರ್ವಕವಾಗಿ ಆ ಅಚ್ಯುತನನ್ನು ಧ್ಯಾನಿಸಿದರೆ ಅಂಥವನು ಮಹಾ ತಪಸ್ವಿಯೂ ಪಜ್ತಿಪಾವನನೂ ಆಗುವನು.

ಈ ಅರ್ಥದಲ್ಲಿ ಪರಮ ಪೂಜ್ಯರಾದ ವ್ಯಾಸರ ವಿವರಣೆಯನ್ನು ಕೇಳು:-

ಆಲೋಢ್ಯ ಸರ್ವಶಾಸ್ತ್ರಾಣಿ ವಿಚಾರ್ಯಚ ಪುನಃ ಪುನಃ |
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ ||

ಸರ್ವ ಶಾಸ್ತ್ರಗಳನ್ನೂ ಆಲೋಚನೆಮಾಡಿ, ಪುನಃಪುನಃ ವಿಚಾರಿಸಿ ನೋಡುವಲ್ಲಿ "ಶ್ರೀಮನ್ನಾರಾಯಣನನ್ನು ಧ್ಯಾನಿಸಬೇಕು" ಎಂಬಿದೊಂದರ್ಥವೇ ಮುಖ್ಯವಾಗಿ ನಿಷ್ಕರ್ಷೆಯಾಗುವುದು.

ಓ ಬ್ರಾಹ್ಮಣರುಗಳಿರಾ! ಸತ್ವಗುಣ ಸಂಪನ್ನರಾಗಿ ಸದಾ ಓಂ ಎಂದು ಶ್ರೀಹರಿಯನ್ನು ಧ್ಯಾನಿಸಿರಿ, ಕೇಶವನ ನಾಮವನ್ನು ಪಠಿಸಿರಿ, ಸ್ಮರಿಸಿರಿ. ಒಂದುಳಿಯದಂತೆ ಸರ್ವ ಫಲಗಳೂ ನಿಮ್ಮ ನಿಮ್ಮ ಕೈ ಸೇರುವವು. (ಹರಿವಂಶ)

ಅಗ್ನಿಯು ಸಮಸ್ತ ಲೋಹಗಳನ್ನೂ ಹೇಗೆ ಭಸ್ಮಮಾಡುವನೋ, ಹಾಗೆಯೇ ಭಗವನ್ನಾಮ ಸಂಕೀರ್ತನವು ಸಕಲ ದುರಿತಗಳನ್ನೂ ನಾಶಗೊಳಿಸುವುದು.

ಹರಿರ್ಹರತಿ ಪಾಪಾನಿ ದುಷ್ಟಚಿತ್ತೈ ರಪಿ ಸ್ಮೃತಃ ।
ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇ ವ ಹಿ ಪಾವಕಃ॥

ಮನಃಪೂರ್ವಕವಾಗಿ ಇಲ್ಲವೆ ಔದಾಸೀನ್ಯದಿಂದ ಬೆಂಕಿಯನ್ನು ಮುಟ್ಟಿದರೂ ಅದು ಸುಡುವುದಲ್ಲವೆ? ಹಾಗೆಯೇ ತಜಸ್ಥನಾಗಿ ಶ್ರೀಹರಿಯನ್ನು ನೆನೆದರೂ ಆ ಮಹಾನುಭಾವನು ಪಾಪಗಳನ್ನೆಲ್ಲಾ ಪರಿಹರಿಸುವನು.

ಜ್ಞಾನತೋಽಜ್ಞಾನತೋ ವಾಪಿ ವಾಸುದೇವಸ್ಯ ಕೀರ್ತನಾತ್
ತತ್ಸರ್ವಂ ವಿಲಯಂ ಯಾತಿ ತೋಯಸ್ಥಂ ಲವಣಂ ಯಥಾ ॥

ಜ್ಞಾನದಿಂದಲಾಗಲೀ, ಅಜ್ಞಾನದಿಂದಲೇ ಆಗಲಿ ಶ್ರೀ ವಾಸುದೇವನಾಮ ಸಂಕೀರ್ತನ ಮಾಡುವ ಪುರುಷನ ಪಾಪವೆಲ್ಲವೂ ನೀರಿನಲ್ಲಿ ಹಾಕಿದ ಉಪ್ಪಿನ ಗಡ್ಡೆಯಂತೆ ನಿಮಿಷಮಾತ್ರದಲ್ಲಿ ಕರಗಿ ಹೋಗುವುದು.

ಅಚ್ಯುತನ ಪಾದಾರವಿಂದದಲ್ಲಿ ಚಿತ್ತವನ್ನು ನೆಲೆಗೊಳಿಸುವ ಮನುಷ್ಯನು ನರಕದ ಮುಖವನ್ನು ನೋಡುವುದಿಲ್ಲ. ಆತನ ಕಾರ್ಯಗಳಿಗೆ ಯಾವುದೊಂದು ಅಡ್ಡಿಯೂ ಬರುವುದಿಲ್ಲ. ಅವನಿಗೆ ಬ್ರಹ್ಮಲೋಕವೂ ಅಲ್ಪವಾಗಿಯೇ ಕಾಣುವುದು. ಕೈವಲ್ಯವೆಂಬುದು ಅವನ ಕರಗತವಾಗಿರುವುದು, ಹೀಗಿರಲು ಭಕ್ತನ ಪಾಪವು ಪರಿಹರವಾಗುತ್ತದೆ ಎಂಬುದು ಆಶ್ಚರ್ಯವಲ್ಲ. (ವಿಷ್ಣು ಪುರಾಣ)

ಶಮಾಯಾಲಂ ಜಲಂ ವಹ್ನೇಃ ತಮಸೋ ಭಾಸ್ಕರೋ ದಯಃ ।
ಶಾಂತಿಃ ಕಲೌ ಹ್ಯಘೌಘಸ್ಯ ನಾಮ ಸಂಕೀರ್ತನಂ ಹರೇಃ ॥

ಬೆಂಕಿಯನ್ನು ಆರಿಸಲಿಕ್ಕೆ ನೀರು ಶಕ್ತವಾದುದು. ಕತ್ತಲೆಯನ್ನು ಓಡಿಸಲು ಸೂರ್ಯನು ಸಮರ್ಥ. ಕಲಿಕಾಲದಲ್ಲಿ ನರನು ಆಚರಿಸುವ ದುರಿತವನ್ನೆಲ್ಲಾ ಪರಿಹರಿಸಲು ಶ್ರೀ ಹರಿನಾಮ ಸಂಕೀರ್ತನವೇ ಶಕ್ತವಾದುದು.

"ಶ್ರೀಹರಿಯ ನಾಮ ಸಂಕೀರ್ತನವೊಂದೇ ನನಗೆ ಸರ್ವೋತ್ತಮವಾದ ಜೀವನವಾಗಿದೆ. ಈ ಕಲಿಯುಗದಲ್ಲಿ ಅದನ್ನು ಬಿಟ್ಟರೆ ಬೇರೆ ಗತಿಯಿಲ್ಲ. ಎಂದು ಒಬ್ಬ ರುಷಿಕುಮಾರನು ಗಾನಮಾಡಿದಾನೆ.

ಮತ್ತು ಸರ್ವ ವ್ಯಾಪಕನಾದ ಶ್ರೀ ಮಹಾ ವಿಷ್ಣುವನ್ನು ಪೂಜಿಸುವ ಪುರುಷನು ಸರ್ವ ಪಾಪ ವಿನಿರ್ಮುಕ್ತನಾಗುವನು,

ಸಂಸಾರ ಸರ್ಪಸಂದಷ್ಟ ನಷ್ಟ ಚೇಷ್ಟೈಕ ಭೇಷಜಂ ।
ಕೃಷ್ಣೇತಿ ವೈಷ್ಣವಂ ಮಂತ್ರಂ ಶ್ರುತ್ವಾಮುಕ್ತೋಭವೇನ್ನರಃ ॥ (ಹರಿವಂ)

ಸಂಸಾರವೆಂಬ ವಿಷಸರ್ಪದಿಂದ ಕಚ್ಚಿಸಿಕೊಂಡು ವೈಮರೆತು ಮೂರ್ಛೆಬಿದ್ದಿರುವವನಿಗೆ ಕೃಷ್ಣ, ಕೃಷ್ಣ, ಎಂಬ ಸಂಜೀವನ ಮಂತ್ರವು ಕಿವಿಯನ್ನು ಹೊಕ್ಕ ಕೂಡಲೆ ಆ ಮನುಷ್ಯನು ಆವಿಷದೋಷದಿಂದ ಮುಕ್ತನಾಗುವನು. ಸಕಲಸನ್ಮಂಗಳಗಳಿಗೂ ಮನೆಯಾಗಿರುವ ಶ್ರೀಹರಿಯು ಯಾರಹೃದಯದಲ್ಲಿರುವನೋ ಅಂಥವರ ಯಾವಕಾರ್ಯಕ್ಕೂ ಯಾವುದೊಂದು ಅಡ್ಡಿಯೂ ಬರುವುದಿಲ್ಲ. ನಿಯಮಪರನಾಗಿ ನಿತ್ಯವೂ ಜನಾರ್ದನನ್ನು ಚಿಂತಿಸುತ್ತಿದ್ದರೆ ಆ ಹರಿಯೇ ರಕ್ಷಾಮಣಿಯಾಗುವನು, ಅಚ್ಯುತನ ಆಸರೆ ಇರುವವನಿಗೆ ಹಾನಿ ಎಲ್ಲಿ ಬರುವದು? ಸಾವಿರಸಾರಿ ಗಂಗಾ ಸ್ನಾನದಿಂದಲೂ, ಪುಷ್ಕರಸಮಯದಲ್ಲಿ ಕೋಟಿಬಾರಿ ತ್ರಿವೇಣಿಯಲ್ಲಿ ಅವಗಾಹನ ಮಾಡುವುದರಿಂದಲೂ, ನಾಶಹೊಂದುವ ಪಾಪವೆಲ್ಲ ಶ್ರೀ ಹರಿಯನ್ನು ನೆನೆದ ಮಾತ್ರದಲ್ಲಿಯೇ ಲಯವನ್ನು ಹೊಂದುವುದು. ಮಾನವನು ಆಚರಿಸುವ ಸಮಸ್ತ ಪ್ರಾಯಶ್ಚಿತ್ತಗಳಿಗಿಂತಲೂ, ವಿವಿಧವಾದ ತಪಸ್ಸುಗಳಿಗಿಂತಲೂ ಶ್ರೀ ಕೃಷ್ಣನಾಮಸ್ಮರಣೆಯೇ ದೊಡ್ಡದೆನಿಸಿದೆ. ಒಂದು ಸಾರಿ ಶ್ರೀಕೃಷ್ಣನಾಮೋಚ್ಚಾರಣೆಯ ಮಾತ್ರದಿಂದ ಘೋರವಾದ ನರಕಯಾತನೆಯನ್ನುಂಟುಮಾಡುವ ಕಲಿ ಕಲ್ಮಷವೆಲ್ಲ ಲಯವಾಗುವುದು.

ಶ್ರೀಮನ್ನಾರಾಯಣನನ್ನು ಎಚ್ಚರದಪ್ಪದೆ ಒಂದು ಮುಹೂರ್ತಕಾಲ ಧ್ಯಾನಮಾಡಿದರೂ ಸಿದ್ಧಿಯನ್ನು ಪಡೆಯುತ್ತಾನೆ. ಹೀಗಿರಲು ಬಹುಕಾಲದ ವರೆಗೂ ಶ್ರೀಹರಿ ಪರಾಯಣನಾಗಿ ಧ್ಯಾನಿಸಿದರೆ ಫಲಗಳಿಗೆ ಕಡಮೆಯುಂಟೆ? ಶ್ರೀ ಹರಿಸ್ಮರಣೆ ಯಿಲ್ಲದೆ ಒಂದು ಮುಹೂರ್ತಕಾಲವು ಕಳೆದು ಹೋದರೂ ಕಳ್ಳರು ಆಕ್ರಮಿಸಿದರೆ ಹೇಗೋ ಹಾಗೆ ಕ್ಲೇಶಪಡಬೇಕು. ಒಂದು ಸಾರಿಯಾದರೂ ಗೋವಿಂದನಾಮಸ್ಮರಣೆಯನ್ನು ಮಾಡಿದರೆ ಬೆಂಕಿಯೊಂದ ಹತ್ತಿಯ ರಾಶಿಯು ಹೇಗೋ ಹಾಗೆ ಪಾಪರಾಶಿಯೆಲ್ಲವೂ ನಿಮಿಷ ಮಾತ್ರದಲ್ಲಿ ನಾಶವಾಗಿ ಹೋಗುವದು. ಚಪಲಚಿತ್ತನಾಗದೆ ಮಧುಸೂದನನ್ನು ಆಶ್ರಯಿಸಿದರೆ ಜನ್ಮವೆಂಬ ಮೃತ್ಯುವಿನಿಂದಲೂ, ಜರೆಯೆಂಬ

ಮೊಸಳೆಯಿಂದಲೂ ಕೂಡಿರುವ ಸಂಸಾರವೆಂಬ ಸಾಗರವನ್ನು ದಾಟುತ್ತಾನೆ ಹೇರಳವಾದ ಉರಿಯುಳ್ಳದಾಗಿ ಗಾಳಿಯಿಂದ ಕೂಡಿರುವಬೆಂಕಿಯು ಹುಲ್ಲಿನ ಬಣಬೆಯನ್ನು ಸುಡುವ ಹಾಗೆ ಯೋಗಿಗಳ ಮನದೊಳಗಿರುವ ವಿಷ್ಣುವು ಸಕಲ ಕಿಲ್ಬಿಷವನ್ನೂ ಧ್ವಂಸಮಾಡುತ್ತಾನೆ. ಸಕಲ ಭೂತಗಳಿಗೂ ಪತಿಯಾಗಿ ಜಗದ್ಗುರುವೆನಿಸಿರುವ ಶ್ರೀ ಜನಾರ್ದನನ್ನು ಸ್ಮರಿಸುವ ಮನುಷ್ಯನು ಅಶೇಷ ದುಃಖಗಳನ್ನೂ ಪರಿಹರಿಸಿಕೊಂಡು ಸಮಸ್ತಕಾರ್ಯಸಿದ್ಧಿಯನ್ನೂ ಪಡೆಯುವನು. ಅನೇಕ ದೋಷಗಳಿಂದ ತುಂಬಿರುವ ಈ ಕಲಿಯುಗದಲ್ಲಿ ಪುರುಷನು ವಿಷಯಾಸಕ್ತನಾಗಿ ಸಕಲಪಾಪಗಳನ್ನಾಚರಿಸಿದರೂ ನಿಯಮಪರನಾಗಿ ಗೋವಿಂದನಾಮಸ್ಮರಣೆ ಮಾಡಿದರೆ ಪರಿಶುದ್ಧನಾಗುತ್ತಾನೆ.

ಜಪ, ಹೋಮ, ಅರ್ಚನೆಗಳನ್ನಾಚರಿಸುವ ಸಮಯದಲ್ಲಿ ಯಾವನ ಮನಸ್ಸು ಪರವಾಸುದೇವನಲ್ಲಿ ನೆಲೆಗೊಂಡಿರುವುದೋ ಅವನಿಗೆ ಮುಕ್ತಿಯುಂಟಾಗಲು ಇಂದ್ರಪದವಿ ಮೊದಲಾದವುಗಳೇ ತಡೆಯಾಗಿರುವುವು, ಎಂದರೆ, ಅವನು ಸ್ವರ್ಗಸುಖಕ್ಕೆ ಮನ ಸೋಲದಿದ್ದರೆ ಮುಕ್ತನಾಗುವನು.

"ಲೋಕತ್ರಯಕ್ಕೂ ಒಡೆಯನೆನಿಸಿ, ಅಪಾರವಾದ ಮಹಿಮೆಯುಳ್ಳ ಸರ್ವಶಕ್ತನಾದ ಶ್ರೀಹರಿಯನ್ನು ಒಂದು ಸಾರಿಯಾದರೂ ವಂದಿಸಿದರೆ, ಸಾವಿರಾರು ಜನ್ಮಗಳಲ್ಲಿ ಆರ್ಜಿಸಿದ ದುರಿತವೆಲ್ಲವೂ ನಾಶವಾಗುವುದು."

ಏಕೋಽಪಿ ಕೃಷ್ಣಾಯ ಕೃತಃ ಪ್ರಣಾಮಃ ದಶಾಶ್ವಮೇಧಾವಭೃಥೇನ ತುಲ್ಯಃ? ||
ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣಪ್ರಣಾಮೋ ನ ಪುನರ್ಭವಾಯ ||,

"ಶ್ರೀಕೃಷ್ಣನಿಗೆ ಮಾಡುವ ಒಂದು ನಮಸ್ಕಾರವೂ ಹತ್ತು ಅಶ್ವಮೇಧಯಾಗಗಳ ಫಲಗಳಿಗಿಂತಲೂ ಮಿಗಿಲಾದುದಾಗಿರುವುದು.; ಹೇಗೆಂದರೆ— ದಶಾಶ್ವಮೇಧಯಾಗ ಮಾಡಿದ್ದವನಾದರೂ ಸ್ವರ್ಗಾದಿಫಲವನ್ನು ಅನುಭವಿಸಿ ಬಳಿಕ ಭೂಮಿಯಲ್ಲಿ ಜನ್ಮವನ್ನೆತ್ತುವನು. ಶ್ರೀಕೃಷ್ಣನಿಗೆಸಗಿದ ಪ್ರಣಾಮವಾದರೋ ಪುನರ್ಜನ್ಮವನ್ನುಂಟುಮಾಡುವುದಿಲ್ಲ."

"ಕರಿಯಗಸೆಯಹೂವಿನ ಬಣ್ಣವುಳ್ಳವನೂ, ಪೀತಾಂಬರಧಾರಿಯೂ ಆಗಿ ನಾಶರಹಿತನೆನಿಸಿದ ಗೋವಿಂದನನ್ನು ವಂದಿಸುವವರಿಗೆ ಭಯವೆಂದಿಗೂ ಸಂಭವಿಸುವುದಿಲ್ಲ."

"ಚಕ್ರಪಾಣಿಯಾದ ಮುಕುಂದನಿಗೆ, ಮನಸ್ಸಿಲ್ಲದೆ ಎಸಗಿದ ಒಂದು ವಂದನೆಯೂ ಕೂಡ ಸಂಸಾರದ ಕಟ್ಟುಗಳನ್ನೆಲ್ಲ ಒಡಿಸುವುದು."

ಇದೇ ಮೊದಲಾದ ಶ್ರುತಿ, ಸ್ಮೃತಿ, ಪುರಾಣವಚನಗಳಿಂದ ಶ್ರೀಹರಿಯೇ ಸುಖವು, ಸುಖಸಾಧನವು, ಪರಮಾನಂದರೂಪವಾದ ಮಂಗಳಗಳನ್ನು ಸೂಚಿಸತಕ್ಕವನು, ಎಂತಲೂ, ಪ್ರಕಾಶಮಾನರಾದ ದೇವತೆಗಳಿಗೆಲ್ಲ ದೇವನೆಂತಲೂ, ಸಕಲಪ್ರಾಣಿಗಳಿಗೂ ನಾಶರಹಿತನಾದ ತಂದೆ ಎಂತಲೂ, ಅವನೊಬ್ಬನೇ ಸರ್ವಲೋಕೇಶ್ವರನೆಂತಲೂ ಮುಖ್ಯವಾಕ್ಯಾರ್ಥವಾಗಿ ಪರಿಣಮಿಸುವುದು.

"ದೇವರು ಒಬ್ಬನೇ, ಎಲ್ಲ ಭೂತಗಳಲ್ಲಿಯೂ ಅಡಗಿರುವನು, ಸರ್ವವ್ಯಾಪಕನು, ಸರ್ವಪ್ರಾಣಿಗಳಿಗೂ ಅಂತರಾತ್ಮನಾಗಿದಾನೆ, ಸಕಲಕರ್ಮಗಳಿಗೂ ಸ್ವಾಮಿ, ಸಕಲಭೂತಗಳಿಗಾಧಾರ. ಎಲ್ಲರಾಚರಿಸುವ ಕರ್ಮಗಳಿಗೂ ಸಾಕ್ಷಿಯಾಗಿದಾನೆ. ಮತ್ತು ನಿರವಯವನಾಗಿಯೂ ನಿರ್ಗುಣನಾಗಿಯೂ ಇರತಕ್ಕವನು."

"ಸೃಷ್ಟ್ಯಾದಿಯಲ್ಲಿ ಚತುರ್ಮುಖನನ್ನು ನಿರ್ಮಿಸತಕ್ಕವನಾಗಿಯೂ, ಅವನಿಗೆ ವೇದಗಳನ್ನು ಉಪದೇಶಿಸತಕ್ಕವನಾಗಿಯೂ, ಸರ್ವಪ್ರಾಣಿಗಳ ಅಂತರಂಗದಲ್ಲಿ ಬುದ್ಧಿವೃತ್ತಿಗಳನ್ನು ಪ್ರಕಾಶಗೊಳಿಸತಕ್ಕವನಾಗಿಯೂ ಇರುವ ಆ ದೇವನನ್ನೇ ಮೋಕ್ಷೇಚ್ಛೆಯಿಂದ ಮರೆ ಹೋಗುವೆನು." ಎಂದು ಶ್ವೇತಾಶ್ವತರೋಪನಿಷನ್ಮಂತ್ರವು ಮೇಲೆ ಹೇಳಿದ ಅರ್ಥವನ್ನೇ ವ್ಯಕ್ತಗೊಳಿಸುತಲಿದೆ.

## — ಪೂರ್ವಪಕ್ಷ —

ಜೀವಾತ್ಮನು, ಪರಮಾತ್ಮನು ಎಂಬದಾಗಿ ಇಬ್ಬರೂ ಬೇರೆಬೇರೆ ಎಂಬುದು ಸರ್ವಾನುಭವಸಿದ್ಧರಾಗಿರುವಲ್ಲಿ ದೇವರು ಒಬ್ಬನೇ ಎಂಬುದು ಹೇಗೆ ಸಮಂಜಸವಾಗುವುದು? ಎಂದರೆ, ಸಿದ್ಧಾಂತ:—

ದೇವರೊಬ್ಬನೇ ಅಲ್ಲದೆ ಇಬ್ಬರಿಲ್ಲ. "ಈ ಕಾಣಬರುವದನ್ನೆಲ್ಲ ಅವನೇ ಸೃಷ್ಟಿಸಿ ಇದರೊಳಗೆಲ್ಲ ಅವನೇ ಒಳಹೊಕ್ಕಿದಾನೆ."

"ಒಬ್ಬನೇ ದೇವರು ಪ್ರಪಂಚರೂಪದಿಂದ ಅನೇಕಾಕಾರವಾಗಿ ತಾನೇ ಕಾಣಿಸಿಕೊಳ್ಳುತಲಿದಾನೆ."

ಅಗ್ನಿರ್ಯಥೈಕೋಭುವನಂಪ್ರವಿಷ್ಟೋ ರೂಪಂರೂಪಂಪ್ರತಿರೂಪೋಬಭೂವ।
ಏಕಸ್ತಥಾಸರ್ವಭೂತಾಂತ ರಾತ್ಮಾರೂಪಂರೂಪಂಪ್ರತಿರೂಪೋಬಭೂವ॥ (ಶ್ರು)

"ಅಗ್ನಿಯು ಒಬ್ಬನಾದರೂ ಅನೇಕಾಕಾರವಾಗಿ ಹೇಗೆ ಕಾಣಬರುತ್ತಿದಾನೆಯೊ, ವಾಯುವು ಒಬ್ಬನಾದರೂ ಅನೇಕಾಕಾರವಾಗಿ ಹೇಗೆ ಕಾಣಬರುತ್ತಿದಾನೆಯೋ, ಸೂರ್ಯನು ಒಬ್ಬನೆ ಆಗಿದ್ದರೂ ಅನೇಕ ಜಲಾಶಯುಗಳಲ್ಲಿ ಅನೇಕಾಕಾರನಾಗಿ ಕಂಡುಬರುತ್ತಾ ಯಾವುದರ ಲೇಪವನ್ನೂ ಹೇಗೆ ಪಡೆಯುವದಿಲ್ಲವೋ, ಹಾಗೆಯೇ ಪರಮಾತ್ಮನು ಒಬ್ಬನೇ ಆಗಿದ್ದರೂ, ಅನೇಕಾಕಾರವಾಗಿ ಕಾಣಬರುತ್ತಾ ಯಾವುದೊಂದರ ಲೇಪವೂ ಇಲ್ಲದೆ ಇರುವನು. ಯಾರಾದರೆ ಈತನನ್ನು ತಂತಮ್ಮ ಅಂತರಂಗದಲ್ಲಿಯೇ ಅರಿಯುತ್ತಾರೆಯೋ ಅವರಿಗೇ ಆ ಅಭಿನ್ನಸುಖಪ್ರಾಪ್ತಿಯಲ್ಲದೆ ಇತರರಿಗೆ ಇಲ್ಲ." "ಚೇತನರಿಗೆಲ್ಲಾ ಚೇತನನಾಗಿಯೂ, ಅನೇಕಪದಾರ್ಥಗಳಲ್ಲಿ ಒಬ್ಬನೇ ಆಗಿಯೂ ಇರುತ್ತಾ, ಸರ್ವರ ಕಾಮಗಳನ್ನೂ ಯಾವನು ಅಣಿಮಾಡುತ್ತಾನೆಯೋ ಅಂತರಾತ್ಮನಾಗಿರುವ ಆ ಆತ್ಮನನ್ನು ಅರಿಯುವವರಿಗೇ ಶಾಂತಿಯುಂಟಾಗುವುದಲ್ಲದೆ ಇತರರಿಗೆ ದೊರೆಯದು, "ಸೃಷ್ಟಿಗಿಂತ ಪೂರ್ವದಲ್ಲಿ ಬ್ರಹ್ಮಪದಾರ್ಥವೊಂದೇ ಇದ್ದಿತು" "ಈ ಪರಮಾತ್ಮನಿಗಿಂತ ಬೇರೊಬ್ಬ ನೋಟಗಾರನಿಲ್ಲ, ಕೇಳತಕ್ಕವನಿಲ್ಲ, ತಿಳಿಯತಕ್ಕವನಿಲ್ಲ, ಕರ್ತೃವಿಲ್ಲ, ಅಂತಹ ಏಕಾತ್ಮನನ್ನು ಅರಿತಬಳಿಕ ದುಃಖವಾಗಲಿ ಶೋಕವಾಗಲೀ ಎಲ್ಲಿರುವುದು ?" "ಸೃಷ್ಟಿಗಿಂತ ಪೂರ್ವದಲ್ಲಿ ಸಜಾತೀಯ ವಿಜಾತೀಯ ಸ್ವಗತ ಭೇದಶೂನ್ಯನಾದ ಆತ್ಮನೊಬ್ಬನೇ ಇದ್ದವನು,ಬೇರೇನೂ ಇರಲಿಲ್ಲ" "ಆತ್ಮನೊಬ್ಬನನ್ನೇ ಬ್ರಾಹ್ಮಣರು ಅನೇಕನನ್ನಾಗಿ ವ್ಯವಹರಿಸುತ್ತಾರೆ" ಎಂದೀಪ್ರಕಾರ ಸಾವಿರಾರು ಶ್ರುತಿಸ್ಮೃತಿಗಳು ಆತ್ಮನು ಒಬ್ಬನೇ ಎಂಬದಾಗಿ ಮೊರೆಯಿಡುತಲಿವೆ. ಮತ್ತು "ಸರ್ವಭೂತಗಳಲ್ಲಿಯೂ ನೆಲೆಗೊಂಡಿರುವ ನನ್ನನ್ನೇ ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣನಲ್ಲಿಯೂ, ಗೋವಿನಲ್ಲಿಯೂ, ಆನೆಯಲ್ಲಿಯೂ ನೆಲೆಗೊಂಡವನನ್ನಾಗಿ ಭಜಿಸಿದರೆ ಆ ಆತ್ಮನನ್ನೇ ಪಡೆವನು" "ಸೂರ್ಯನೊಬ್ಬನೇ ಸರ್ವಲೋಕವನ್ನೂ ಪ್ರಕಾಶಗೊಳಿಸುವ ಹಾಗೆ ಒಬ್ಬನಾದ ಆತ್ಮನು ಲೋಕವನ್ನೆಲ್ಲ ಬೆಳಗಿಸುವನು" "ಎಲೈ ಪಾರ್ಥಾ! ಸರ್ವಧರ್ಮಗಳನ್ನೂ ತೊರೆದುಬಿಟ್ಟು ನನ್ನೊಬ್ಬನನ್ನೇ ಮರೆಹೊಗು, ನಾನು ನಿನ್ನನ್ನು ಎಲ್ಲಾ ಪಾಪಗಳಿಂದಲೂ ಬಿಡಿಸುವೆನು, ಅಳದಿರು" ಎಂದು ಶ್ರೀಕೃಷ್ಣಭಗವಂತನೇ ಹೇಳಿದಾನೆ.

" ಎಲೈ ಬ್ರಾಹ್ಮಣರುಗಳಿರಾ ! ನಾನು ಎಂಬದಾಗಿ ಪ್ರತ್ಯಕ್ಷಕ್ಕೆ ಗುರಿಯಾಗುವ ಆತ್ಮನನ್ನೇ ಶ್ರೀಹರಿಯನ್ನಾಗಿ ನೀವು ಸತ್ವಗುಣಸಂಪತ್ತಿ ಯಿಂದ ಸಂಕೀರ್ತನ ಮಾಡಿರಿ, ಮತ್ತು ಧ್ಯಾನಿಸಿರಿ, ಎಂದೂ " ಸರ್ವಭೂ ತಗಳನ್ನೂ ಆತ್ಮನಲ್ಲಿಯೂ, ಆತ್ಮನನ್ನು ಸರ್ವಭೂತಗಳಲ್ಲಿಯೂ ಅರಿತವನು ಸ್ವಾತ್ಮಸ್ವರೂಪವನ್ನು ಪಡೆವನು " ಎಂದೂ ಶ್ರುತಿಯು ಸಾರುತಲಿದೆ.

ಸೃಷ್ಟಿಸ್ಥಿತ್ಯಂತ ಕರಿಣೀಂ ಬ್ರಹ್ಮ ವಿಷ್ಣು ಶಿವಾತ್ಮಿಕಾಂ ।
ಸ ಸಂಜ್ಞಾಂ ಯಾತಿ ಭಗವಾ ನೇಕ ಏವ ಜನಾರ್ದನಃ ॥

" ಸೃಷ್ಟಿ, ಸ್ಥಿತಿ, ಅಂತ ಇವುಗಳನ್ನು ಆಚರಿಸುವ ಬ್ರಹ್ಮ, ವಿಷ್ಣು, ಶಿವ ಎಂಬ ಸಂಜ್ಞೆಯನ್ನು ಒಬ್ಬನೇ ಭಗವಂತನು ಹೊಂದಿದಾನೆ " ಎಂ ದೂ ಶಾಸ್ತ್ರವು ಘಂಟಾಘೋಷವಾಗಿ ಹೇಳುತ್ತಿರುವುದರಿಂದ ವಿಜ್ಞಾನಸ್ವ ರೂಪನಾದ ಪರಮಾತ್ಮನೊಬ್ಬನನ್ನು ಬಿಟ್ಟು ಪರಮಾರ್ಥದಲ್ಲಿ ಬೇರೆ ಪದಾರ್ಥವೇ ಇಲ್ಲ. " ವಾಸುದೇವನೊಬ್ಬನೇ ಪರಮೇಶ್ವರನು ಅವನ ನ್ನು ಬಿಟ್ಟು ಬೇರೇನೂ ಇಲ್ಲ. ಅವನೇ ವಿಜ್ಞಾನಸ್ವರೂಪನು, ಕರ್ಮಭೇದ ದಿಂದ ಬುದ್ಧಿಭೇದವುಳ್ಳವರು ಆತನನ್ನು ಬಹುವಿಧವಾಗಿ ಭಾವಿಸುತ್ತಾರೆ " " ಸಮಸ್ತದೇಹಗಳಲ್ಲಿಯೂ ಆತ್ಮನೊಬ್ಬನೇ ನೆಲೆಗೊಂಡಿರುವಲ್ಲಿ ನೀನು, ನಾನು, ಅವನು ಎಂಬ ಭೇದಭಾವನೆಗೆ ಅವಕಾಶವೆಲ್ಲಿದೆ ? " " ಕಪ್ಪು, ಬಿಳುಪು, ನೀಲಿ, ಹಸಿರು, ಹಳದಿ, ಕೆಂಪು ಮೊದಲಾದ ಬಣ್ಣಗಳಿಂದ ಆ ಕಾಶವು ಹೇಗೆ ಬೇರುಬೇರಾಗಿ ಕಾಣಬರುತ್ತಿದೆಯೋ, ನಿಜವಾಗಿ ವಿಚಾ ರಮಾಡಿ ನೋಡಿದರೆ ಯಾವಬಣ್ಣಗಳೂ ಹೇಗಿಲ್ಲವೋ, ಹಾಗೆಯೇ ಭ್ರಾಂತಿ ದೃಷ್ಟಿಯಿಲ್ಲದವರಿಗೆ ಆತ್ಮನು ಒಬ್ಬನೇ ಹೊರತು ಭೇದವಿಲ್ಲ ಎಂಬುದು ಸ್ಪಷ್ಟವಾಗುವುದು. "

" ಈ ಪ್ರಪಂಚದಲ್ಲಿ ಏನೇನು ಕಂಡುಬರುವುದೋ ಅದೆಲ್ಲವೂ ಅಚ್ಯು ತನೆಂಬ ಒಂದೇ ಪದಾರ್ಥ. ಅವನನ್ನು ಬಿಟ್ಟು ಬೇರೇನೂ ಇಲ್ಲ, ಆದು ದರಿಂದ ನಾನು ಎಂಬುದೂ ಅವನೇ, ನೀನು ಎಂಬುದೂ ಅವನೇ, ಅವನು ಎಂಬುದೂ ಅವನೇ, ಅವನನ್ನು ಹೊರತು ವ್ಯವಹಾರ ತೀರಿದ ಬಳಿಕ ಬೇರಾವುದೂ ಇಲ್ಲ, ಆದಕಾರಣ ಭೇದಭ್ರಾಂತಿಯನ್ನು ಬಿಟ್ಟುಕಳೆ, ಎಂದು ಹೀಗೆ ಹೇಳಲ್ಪಟ್ಟ ಆ ರಾಜವರ್ಯನು ಭೇದಭಾವನೆಯನ್ನು ತೊರೆದನು " ಎಂದು (ವಿ. ಪು)

" ಇದು, ನಾನು, ಎಂಬಿದೆಲ್ಲವೂ ವಾಸುದೇವನೇ ಅಲ್ಲದೆ ಬೇರಿಲ್ಲ, ಅವನೇ ಪರಮಪುರುಷನಾದ ಪರಮೇಶ್ವರನು, ಎಂಬದಾದಿ ನಿನ್ನ ಹೃದಯು ಗತನಾದ ಪರಮಾತ್ಮನಲ್ಲಿ ಭಾವನೆಯಿರಲಿ, ಉಳಿದ ಭೇದಭಾವನೆಯು ನ್ನೆಲ್ಲತೊರೆ "

" ಎಲೈ ದೇವತೆಗಳಿರಾ ! ನೀವು, ನಾನು, ಶಿವನು ಇವರೆಲ್ಲರೂ ನಾರಾಯಣಸ್ವರೂಪವೇ ಅಲ್ಲದೆ ಬೇರಿಲ್ಲ, ಭಿನ್ನ ಭಿನ್ನವಾಗಿ ಕಾಣಬರುವು ದೆಲ್ಲವೂ ಆತನ ವಿಭೂತಿಯೋ ಎಂದರೆ ಮಹಿಮೆಯೋ ಅಲ್ಲದೆ ಬೇರಲ್ಲ, ಅಧಿಕ ನ್ಯೂನಗಳೆಂತಲೂ, ಬಾಧ್ಯ ಬಾಧಕಗಳೆಂತಲೂ ಕಾಣಬಂದರೂ ಪರಮಾ ರ್ಥದಲ್ಲಿ ಭೇದವಿಲ್ಲ "

ಭವಾನಹಂಚ ವಿಶ್ವಾತ್ಮಾ ಏಕ ಏವ ಹಿ ಕಾರಣಂ |
ಜಗತೋಽಸ್ಯ ಜಗತ್ಯರ್ಥೇ ಭೇದೇನಾವಾಂ ವ್ಯವಸ್ಥಿತೌ ||
ತ್ವಯಾ ಯದಭಯಂ ದತ್ತಂ ತದ್ದತ್ತಮಭಯಂ ಮಯಾ |
ಮತ್ತೋ ವಿಭಿನ್ನ ಮಾತ್ಮಾನಂ ದ್ರಷ್ಟುಂ ನಾರ್ಹಸಿಶಂಕರ ||

" ಎಲೈ ಶಂಕರನೇ ನೀನು ಬೇರಲ್ಲ, ನಾನು ಬೇರಲ್ಲ, ಆದರೂ ಪ್ರಪಂಚದ ಕಾರ್ಯನಿರ್ವಾಹಕರ್ತೃಗಳಾಗಿ ಬೇರುಬೇರಾಗಿ ನೆಲೆಗೊಂಡಿ ದೇವೆ, ನೀನು ಯಾರಿಗೆ ಅಭಯವನ್ನು ಕೊಡುವೆಯೋ, ಅದು ನನ್ನಿಂ ದಲೇ ಕೊಡಲ್ಪಟ್ಟುದು, ಹೀಗೆ ನಾನೇ ನೀನಾಗಿಯೂ, ನೀನೇ ನಾನಾಗಿ ಯೂ ಇರುವಲ್ಲಿ ಅವಿದ್ಯೆಯಿಂದ ಮೋಹಗೊಂಡ ಪುರುಷರು ನಮ್ಮ ವಿಷಯ ದಲ್ಲಿ ಭಿನ್ನದೃಷ್ಟಿಯುಳ್ಳವರಾಗಿದಾರೆ " " ಯಾರು ನನ್ನನ್ನಾಗಲಿ, ಬ್ರಹ್ಮ ನನ್ನಾಗಲಿ, ವಿಷ್ಣುವಿಗಿಂತಲೂ ಬೇರಾದವದರನ್ನಾಗಿಭಾವಿಸುತ್ತಾರೆಯೋ ಅಂತಹ ಕುತರ್ಕಬುದ್ಧಿಯ ಮೂಢರು ನರಕಯಾತನೆಯನ್ನು ಅನುಭವಿ ಸುತ್ತಾರೆ. ಮತ್ತು ಅವರಿಗೆ ಬ್ರಹ್ಮಹತ್ಯೆಗೆ ಸಮಾನವಾದ ಪಾಪವು ಸಂಘಟಿಸುವುದು. "

" ಎಲೈ ಗೋವಿಂದನೇ ! ನೀನು ಸರ್ವಭೂತಗಳಿಗೂ ಆದಿ, ಮಧ್ಯ ವು, ಮತ್ತು ಅಂತ, ಈ ಪ್ರಪಂಚವೆಲ್ಲ ನಿನ್ನಿಂದ ಉಂಟಾಗಿರುವುದು, ನಿನ್ನಲ್ಲಿಯೇ ಲಯವನ್ನು ಪಡೆಯುವುದು. ನೀನೇ ನಾನು, ನಾನೇ ನೀನು

ಅಹಂ ತ್ವಂ ಸರ್ವಗೋದೇವ ತ್ವಮೇವಾಹಂ ಜನಾರ್ದನ |
ಆವಯೋ ರಂತರಂ ನಾಸ್ತಿಶಬ್ದೈ ರರ್ಥೈರ್ಜಗತ್ಪತೇ ||

ನಾಮಾನಿ ತವ ಗೋವಿಂದ ಯಾನಿಲೋಕೇ ಮಹಾಂತಿಚ |
ತಾನ್ಯೇವ ಮಮ ನಾಮಾನಿ ನಾತ್ರಕಾರ್ಯಾ ವಿಚಾರಣಾ || (ಹರಿವಂಶ)

ನಿನ್ನ ಹೆಸರುಗಳೆಲ್ಲವೂ ನನ್ನ ಹೆಸರುಗಳೇಆಗಿವೆ, ನೀನು ಸರ್ವವ್ಯಾಪಿಯಾಗಿ ರುವುದರಿಂದ ನಾನೂ ಸರ್ವವ್ಯಾಪಿಯೇ. ನಮ್ಮಿಬ್ಬರಿಗೂ ಭೇದವಿಲ್ಲ ನಿನ್ನನ್ನು ಉಪಾಸನ ಮಾಡಿದರೆ ಅದು ನನ್ನ ಉಪಾಸನೆಯೇ ಆಗಿದೆ, ಯಾವ ನಾದರು ನಿನ್ನನ್ನು ದ್ವೇಷಿಸಿದರೆ ಅವನು ನನ್ನನ್ನೇ ದ್ವೇಷಿಸತಕ್ಕವನಾಗು ತ್ತಾನೆ, ನಿನ್ನನ್ನು ಬಿಟ್ಟರೆ ಬೇರಾವುದೂ ಇಲ್ಲದಿರುವುದರಿಂದ ನಿನಗೂ ನನಗೂ ಶಬ್ದದಿಂದಲಾಗಲಿ, ಅರ್ಥದಿಂದಲಾಗಲಿ ಭೇದವಿಲ್ಲ. ಹಿಂದೆ ಯಾ ವುದು ಆಗಿದ್ದಿತೋ, ಈಗ ಯಾವುದು ಆಗಿದೆಯೋ, ಮುಂದೆ ಯಾವುದು ಆಗುವುದೋ ಅದೆಲ್ಲವೂ ನೀನೆಯಲ್ಲದೆ ಅನ್ಯವಲ್ಲ." ಎಂದೀಪ್ರಕಾರ, ಐತ ರೇಯ, ತೈತ್ತರೀಯೋಪನಿಷತ್ತುಗಳೂ, ವಿಷ್ಣುಪುರಾಣ, ಹರಿವಂಶ, ಭಾರತ, ಭವಿಷ್ಯೋತ್ತರಪುರಾಣ, ಮೊದಲಾದಸಾವಿರಾರುಪ್ರಮಾಣಗಳೂ ಆತ್ಮಭೇದವಿಲ್ಲವೆಂದು ಕರತಲಾಮಲಕವಾಗಿ ಐಕಕಂಠ್ಯದಿಂದ ಹೇಳುತ್ತಿವೆ. ಮತ್ತು "ಈ ಹೃದಯಗತನಾದ ಆತ್ಮನೇ ಪರಮಾತ್ಮನು, ಎಂದು ಯೋಗಿ ಗಳು ತಾವು ತಿಳಿಯುವುದಲ್ಲದೆ ಇತರರಿಗೂ ಬೋಧಿಸುತ್ತಾರೆ, ಈ ಆತ್ಮನೇ ಶಾಸ್ತ್ರದಲ್ಲಿ ಹೇಳಿರುವ ಸತ್ಯಜ್ಞಾನಾನಂದಾದಿ ಲಕ್ಷಣದ ಪರಮಾತ್ಮನು, 'ಎಲೈ ದೇವತೆಯೇ ನೀನೇ ನಾನಾಗಿದೇನೆ, ನಾನೇ ನೀನಾಗಿದ್ದೀಯೆ, ಈ ಪುರುಷನ ಅಂತರಾತ್ಮನೂ, ಸೂರ್ಯಮಂಡಲಾಂತರ್ಗತನಾದ ಆತ್ಮನೂ ಒಬ್ಬನೇ ಅಲ್ಲದೆ ಬೇರಲ್ಲ. ಈ ಆತ್ಮನೇ ಬ್ರಹ್ಮ, ಇವನಿಗೆ ಮೊದಲಿನವ ನಾಗಲಿ ಮುಂದಿನವನಾಗಲಿ, ಸಮನಾಗಲಿ, ಹೆಚ್ಚಾಗಲಿ ಬೇರೆ ಇಲ್ಲ. ಇವನು ಮಹಾಂತನು, ಜನ್ಮಜರಾಮೃತ್ಯುರೋಗಾದಿಗಳಿಲ್ಲದವನು, ಈತ ನು ಮನಸ್ಸಿಗಾಗಲಿ, ವಾಕ್ಕಿಗಾಗಲಿ, ಗೋಚರಿಸತಕ್ಕವನಲ್ಲ. ಎಲ್ಲವನ್ನೂ ಈತನು ಅರಿಯಬಲ್ಲ." ಇಂತಿವೇ ಮೊದಲಾದ ಶ್ರುತಿ, ಸ್ಮೃತಿ ವಚನ ಗಳೂ ಸಾವಿರಾರುಉಂಟು, ಯುಕ್ತಿಗಳೂ ಹೇರಳವಾಗಿ ಇವೆ.

## — ಪೂರ್ವಪಕ್ಷ. —

ಲೋಕದೊಳಗೆ ಸಾಲಗ್ರಾಮದಲ್ಲಿ ವಿಷ್ಣುವನ್ನು ಧ್ಯಾನಿಸುತ್ತೇವೆ, ಒಂದು ವಿಗ್ರಹದಲ್ಲಿ ಶ್ರೀರಾಮನನ್ನು ಉಪಾಸನೆ ಮಾಡುತ್ತೇವೆ, ಒಂದು ಲಿಂಗದಲ್ಲಿ ಶಿವನನ್ನು ಆರಾಧಿಸುತ್ತೇವೆ. ಆಯಾ ವಿಗ್ರಹಗಳಿಗೂ ಆಯಾ

ದೇವತೆಗಳಿಗೂ ಅಭೇದಭಾವನೆಯನ್ನು ಮಾಡಿದರೂ ಆಯಾಮೂರ್ತಿಗಳೇ ಬೇರೆ, ದೇವತೆಗಳೇ ಬೇರೆ ಅಲ್ಲವೆ ? ಪಾಷಾಣಾದಿ ವಿಗ್ರಹವೂ, ದೇವತೆಯೂ ಒಂದೇ ಆಗುತ್ತದೆಯೆ ? ಎಂದರೆ,—

## — ಸಿದ್ಧಾಂತ. —

' ಈ ಆದಿತ್ಯನನ್ನು ಬ್ರಹ್ಮನನ್ನಾಗಿ ತಿಳಿ, ' ಈ ಮನಸ್ಸನ್ನು ಬ್ರಹ್ಮನನ್ನಾಗಿ ಉಪಾಸನೆ ಮಾಡು, ' ಈ ಮೂರ್ತಿಯನ್ನು ನರಸಿಂಹನನ್ನಾಗಿ ಭಾವಿಸು, ಎಂದು ಒಂದೊಂದುವಾಕ್ಯವನ್ನು ಹೇಳಿದರೆ, ಆಗ ಅಲ್ಲಿ ಆವಿಗ್ರಹವು ಬೇರೆ. ಅಂತರ್ಯಾಮಿಯು ಬೇರೆ, ಅಲ್ಲಿ ವ್ಯವಹಾರದಿಂದ ಭೇದವುತೋರುವುದು, ಇಲ್ಲಿ ಹಾಗಲ್ಲ. ' ನೀನು ನಾನಾಗದೇನೆ, ನಾನೇನೀನಾಗಿದ್ದಿ, ಹೀಗೆ ಎರಡು ವಾಕ್ಯಗಳಿಂದ ವ್ಯಾವಹಾರಿಕಚೇತನರಿಗೆ ಪರಮಾರ್ಥದಲ್ಲಿ ಅಭೇದವನ್ನು ಹೇಳಿ ಇದೆ, ಆದಕಾರಣ ಇಲ್ಲಿ ಅಭೇದವೆಂದೇ ತಿಳಿಯಬೇಕು. ಇದೂಅಲ್ಲದೆ " ನಾನು ಬೇರೆ, ಆ ದೇವತೆಯು ಬೇರೆ, ಎಂಬದಾಗಿ ಭೇದದೃಷ್ಟಿಯಿಂದ ಯಾವನು ಉಪಾಸನೆ ಮಾಡುತ್ತಾನೆಯೋ ಅವನು ಆತ್ಮತತ್ತ್ವವನ್ನು ಅರಿಯನು, ಅವನು ಪಶುವು, ಅಲ್ಲದೆ ಹಾಗೆ ಭೇದಭಾವನೆಯನ್ನು ಮಾಡಿದರೆ ಮೃತ್ಯುಪರಂಪರೆಯನ್ನು ಹೊಂದುತ್ತಾನೆ, ಭೇದಭಾವನೆಯಿಂದ ಭಯವುಂಟು ಎಂದರೆ ಕೇಡು ಸಂಭವಿಸುವುದು, ಅಭೇದಭಾವನೆಯಿಂದ ಆನಂದಲಾಭ. " ಇದಂಸರ್ವಂ ಯದಯಮಾತ್ಮಾ " ( ಉಪನಿಷತ್ ) " ಈ ಕಾಣಬರುವುದೆಲ್ಲವೂ ಆತ್ಮವೇ " " ಆತ್ಮನೊಬ್ಬನನ್ನು ತಿಳಿದರೆ ಇದೆಲ್ಲವೂ ತಿಳಿಯಬರುವುದು, " ಇದೆಲ್ಲವೂ ಆತ್ಮನಲ್ಲದೆ ಬೇರಲ್ಲ " " ಇದೆಲ್ಲವೂ ಬ್ರಹ್ಮವೇ " ಎಂದು ಅನೇಕೋಪನಿಷದ್ವಾಕ್ಯಗಳು ಬ್ರಹ್ಮಭಿನ್ನ ಪದಾರ್ಥವಿಲ್ಲವೆಂದು ಹೇಳುತ್ತಿವೆ. ಮತ್ತು " ಎಲೈಪಾಂಡವ! ಯಾವುದನ್ನು ತಿಳಿದರೆ ಮರಳಿ ಮೋಹವನ್ನು ಹೊಂದುವುದಿಲ್ಲವೋ, ಮತ್ತು ಯಾವುದನ್ನು ತಿಳಿದಬಳಿಕ ಸರ್ವಭೂತಗಳನ್ನೂ ಆ ನನ್ನಲ್ಲಿ ಕಾಣುವೆಯೋ ಅದನ್ನು ತಿಳಿಸುತ್ತೇನೆ ಕೇಳು" ಎಂದೂ, " ಯಾವುದು ವಿಭಾಗವಿಲ್ಲದ ಪದಾರ್ಥವಾದರೂ ಸರ್ವಭೂತಗಳಲ್ಲಿಯೂ ವಿಭಾಗವನ್ನು ಹೊಂದಿದ ಪದಾರ್ಥದಂತೆ ಕಂಡು ಬರುವುದೋ ಅದರ ಈ ವಿಧವಾದ ತತ್ತ್ವವನ್ನು ತಿಳಿಯುವುದೇ ಸಾತ್ವಿಕಜ್ಞಾನ ಎಂದುತಿಳಿ" ಎಂದೂ ಶ್ರೀಕೃಷ್ಣ ಭಗವಂತನು ಅದ್ವೈತಾತ್ಮಜ್ಞಾನವೇ ಸಮ್ಯಗ್ದರ್ಶನ

ಎಂಬವಾಗಿ ಪ್ರಿಯಶಿಷ್ಯನಾದ ಅರ್ಜುನನಿಗೆ ವಾತ್ಸಲ್ಯದಿಂದ ಉಪದೇಶಿಸಿದಾನೆ.

ಇದಲ್ಲದೆ "ಎಲೈ ಅರ್ಜುನ! ಬಹುವಿಧವಾದ ಜ್ಞಾನದಿಂದ ನಿನಗೆ ಪ್ರಯೋಜನವಿಲ್ಲ, ಒಪ್ಪುಮಾತನ್ನು ಹೇಳುತ್ತೇನೆ ಕೇಳು, ಈ ಪ್ರಪಂಚವನ್ನೆಲ್ಲ ನನ್ನ ನಾಲ್ಕನೆಯ ಒಂದು ಪಾಲಿನಾಗಿ ತಿಳಿ" ಎಂದೂ ತಿಳಿಸಿದಾನೆ" "ಎಲೈ ಮನುಷ್ಯೇಂದ್ರನೆ! ಜೀವಾತ್ಮನಿಗೂ ಬ್ರಹ್ಮನಿಗೂ ಭೇದವನ್ನುಂಟುಮಾಡುವ ಜ್ಞಾನವು ಸಂಪೂರ್ಣವಾಗಿ ನಾಶವಾದರೆ ಬಳಿಕ ಭೇದಜ್ಞಾನವನ್ನು ಕಲ್ಪಿಸುವವರು ಯಾರಿದಾರೆ?"

"ಪರಮಾತ್ಮನು ಒಬ್ಬನೇ ಆದರೂ, ಅಹಂಕಾರದಿಂದ ಸಹಿತನಾದರೆ ಜೀವನೆಂತಲೂ, ಅದರಿಂದ ರಹಿತನಾದರೆ ಅಂತರಾತ್ಮನೆಂತಲೂ ಹೇಳಲ್ಪಡುತ್ತಾನೆ" "ಜೀವಪರರಿಗೆ ಭೇದಜ್ಞಾನವು ಅಜ್ಞಾನದಿಂದ ಕಲ್ಪಿತವಾದುದು, ಅದು ಅಳಿದುಹೋದರೆ ವಿಭಾಗವು (ಭೇದವು) ಅವಿಭಾಗ (ಅಭೇದ) ವಾಗುವುದು ಎಂದು ವಿಷ್ಣುಪುರಾಣ ಮತ್ತು ವಿಷ್ಣುಧರ್ಮೋತ್ತರಗಳು

## — ಪೂರ್ವಪಕ್ಷ —

ಜೀವಾತ್ಮ ಪರಮಾತ್ಮರಿಗೆ ಭೇದವಿಲ್ಲವಿದ್ದರೆ ಒಬ್ಬ ಜೀವನು ದುಃಖಿಯಾಗಿರುವಾಗ ಉಳಿದವರೆಲ್ಲರೂ ದುಃಖಿಗಳಾಗಿರಬೇಕು, ಅಥವಾ ಪರಮಾತ್ಮನು ಸುಖಸ್ವರೂಪನಾಗಿರುವುದರಿಂದ ಜೀವರುಗಳೆಲ್ಲರೂ ಸುಖಾನುಭವದಲ್ಲಿಯೇ ಇರಬೇಕಾಗುವುದು, ಲೋಕದಲ್ಲಿ ಹಾಗಿಲ್ಲ, ವ್ಯತ್ಯಾಸವಾಗಿ ಕಾಣಬರುತ್ತಿದೆ ಎಂದರೆ.—

## — ಸಿದ್ಧಾಂತ —

ಯಥೈಕಸ್ಮಿನ್ ಘಟಾಕಾಶೇ ರಜೋಧೂಮಾದಿಭಿ ರ್ಯುತೇ ।
ನಾನ್ಯೇ ಮಲಿನತಾಂ ಯಾಂತಿ ದೂರಸ್ಥಾಃ ಕುತ್ರಚಿತ್ ಕ್ವಚಿತ್ ॥
ತಥಾ ದ್ವಂದ್ವೈ ರನೇಕೈಸ್ತು ಜೀವೇಚ ಮಲಿನೇ ಕೃತೆ ।
ಏಕಸ್ಮಿನ್ನಾಪರೆ ಜೀವಾ ಮಲಿನಾಸ್ಸಂತಿ ಕುತ್ರಚಿತ್ ॥ (ಯಾಜ್ಞವಲ್ಕ್ಯ)

"ಒಂದು ಗಡಿಗೆಯೊಳಗೆ ಧೂಳಿಯಾಗಲಿ ಧೂಮಧೂಪವಾಗಲಿ ತುಂಬಿ ಅಲ್ಲಿನ ಆಕಾಶವನ್ನೆಲ್ಲ ವಾಸನೆಮೊದಲಾದವುಗಳಿಂದ ಕೆಟ್ಟಿರುವಹಾಗೆ ಮಾಡಿದರೆ, ಉಳಿದ ಗಡಿಗೆ ಮಡಿಕೆ ಕುಡಿಕೆಗಳೊಳಗಣ ಆಕಾಶವೆಲ್ಲ ಕೆಟ್ಟಿರು

ವುದೋ ? ಇಲ್ಲವಷ್ಟೆ ? ಹಾಗೆಯೇ ಅಜ್ಞಾನಕಲ್ಪಿತವಾದ ದೇಹವೆಂಬ ಉಪಾಧಿಯಿಂದ ಕೂಡಿರುವ ಒಬ್ಬ ಜೀವನು ದುಃಖಾಜ್ಞಾನಾದಿಗಳಿಂದಮಲಿನನಾಗಿ ಕಂಡುಬಂದರೆ, ಉಳಿದವರೆಲ್ಲರೂ ಮಲಿನರಾಗುವುದಿಲ್ಲವೆಂದು ತಿಳಿ" ಎಂದು ಬ್ರಹ್ಮಯಾಜ್ಞವಲ್ಕ್ಯ. ಅಖಂಡವಾದ ಆಕಾಶವು ಒಂದೇ ಆದರೂ ಘಟ ಮೊದಲಾದವುಗಳಲ್ಲಿ ಹೇಗೆ ಬೇರುಬೇರಾಗಿ ಕಾಣಬರುತ್ತದೆಯೋ ಹಾಗೆಯೇ ಆತ್ಮನೊಬ್ಬನಾದರೂ,ಸೂರ್ಯನು ಅನೇಕಜಲಾಶಯಗಳಲ್ಲಿಭಿನ್ನ ಭಿನ್ನವಾಗಿ ಕಂಡುಬರುವಂತೆ ಬೇರುಬೇರಾಗಿ ಕಾಣಬರುತ್ತಾನೆ" ಎಂದು ಅಲ್ಲಿಯೇ ಹೇಳಿ ಇದೆ. ಮತ್ತು—

"ಎಲೈ ಭಾರತಾ ! ಸರ್ವಕ್ಷೇತ್ರಗಳಲ್ಲಿಯೂ (ಶರೀರ) ಇರುವವನನ್ನು ನನ್ನನ್ನಾಗಿಯೇ ತಿಳಿ" ಎಂದು ಗೀತೆ.

"ಕೆಂಪಗೆ ಕಾದಿರುವ ಲೋಹಪಿಂಡದಿಂದ ಸಣ್ಣಕಿಡಿಗಳು ಹೇಗೆ ಸಿಡಿಯುವುವೋ ಹಾಗೆಯೇ ಪರಮಾತ್ಮನೊಬ್ಬನಿಂದ ಅನೇಕ ಜಗತ್ತುಗಳುಂಟಾಗುತ್ತವೆ ಎಂದು ಯೋಗಯಾಜ್ಞವಲ್ಕ್ಯ

"ಉತ್ಪತ್ತಿಶೂನ್ಯನಾದ ಪರಮಾತ್ಮನು ಔಪಾಧಿಕವಾದ ಶರೀರವನ್ನು ಗ್ರಹಿಸಿರುವುದರಿಂದ ಹುಟ್ಟಿದಾನೆ ಎಂಬ ವ್ಯವಹಾರವುಂಟಾಗಿದೆ"

"ನಡುಮನೆಯೊಳಗೆ ಬಿದ್ದಿರುವ ಹಗ್ಗದ ತುಂಡು ಹಾವಾಗಿ ಹೇಗೆ ಕತ್ತಲಲ್ಲಿ ಕಾಣಬರುತ್ತದೆಯೋ, ಆಕಾಶದಲ್ಲಿರುವ ಚಂದ್ರನು ಒಬ್ಬನೇಆಗಿದ್ದರೂ, ಕಾಚಕಾಮಿಲಾದಿ ದೋಷಗ್ರಸ್ತವಾದ ಕಣ್ಣಿಗೆ ಇಬ್ಬರಾಗಿ ಹೇಗೆ ಕಾಣಬರುವನೋ, ಹಾಗೆಯೇ ನಿತ್ಯನಾಗಿಯೂ ಜ್ಯೋತಿಸ್ಸ್ವರೂಪನಾಗಿಯೂ ಇರುವ ಪರಮಾತ್ಮನೊಬ್ಬನೇ ಉಪಾಧಿಯಿಂದ ಜೀವನಾಗಿಯೂ ಕರ್ತೃವಾಗಿಯೂ ಕಾಣಬರುತ್ತಾನೆ" ಬ್ರಾಹ್ಮಪುರಾಣ. ಮತ್ತು "ಶ್ರೀಹರಿಯು ತನ್ನ ಮಾಯೆಯಿಂದ ಸರ್ವರನ್ನೂ ಮೋಹಗೊಳಿಸುವವನಾಗಿ ದ್ವೈತಬುದ್ಧಿಯನ್ನು ಕಲ್ಪಿಸಿ ಪ್ರಪಂಚವ್ಯವಹಾರವನ್ನು ನಿರ್ವಹಿಸುತ್ತಾ ಮರಳಿ ಸ್ವಸ್ವರೂಪದಲ್ಲಿಯೇ ಇರುವನು" "ನಾಮರೂಪಾತ್ಮಕವಾಗಿ ಕಾಣಬರುವ ಪ್ರಪಂಚವೆಲ್ಲವೂ ಮಾಕ್ಕಿನಿಂದ ಗಡಿಗೆ, ಮಡಕೆ, ಕುಡಿಕೆ, ಶರಾವೆ, ಎಂಬದಾಗಿ ನಾಮಭೇದದಿಂದಲೂ, ಆಕಾರಭೇದದಿಂದಲೂ ಕಾಣಬರುವುದಾದರೂ, ಪರಮಾರ್ಥದಲ್ಲಿಮೃತ್ತಿಕೆಯನ್ನು ಬಿಟ್ಟುಬೇರಿಲ್ಲವೆಂಬುದು ಹೇಗೋ, ಹಾಗೆಯೇ ಬ್ರಹ್ಮಪದಾರ್ಥವೊಂದಲ್ಲದೆ ಬೇರಿಲ್ಲ" ("ಜ್ಞಾನಿ

ಯಾದವನಿಗೆ ಪರಮಾರ್ಥದಲ್ಲಿ (ಮುಕ್ತದಶೆಯಲ್ಲಿ) ಎಲ್ಲವೂ ಆತ್ಮಪದಾರ್ಥವೇ ಆಗಿರಲಾಗಿ, ಆಗ ಯಾವುದರಿಂದ ಯಾರನ್ನು ನೋಡಬೇಕು ? ಕೇಳಬೇಕು ? ಆಘ್ರಾಣಿಸಬೇಕು ? ಅರಿಯಬೇಕು ? ಎಂಬುದಾಗಿ ಪರಮಾರ್ಥಸ್ಥಿತಿಯನ್ನೂ, "ವ್ಯವಹಾರದಶೆಯಲ್ಲಿ ದ್ವೈತವಾಗಿ ಕಾಣಬರುತ್ತಾ, ಬೇರೆ ಬೇರೆ ಚೇತನರಾಗಿಯೂ, ಒಬ್ಬರನ್ನೊಬ್ಬರು ಕಾಣುವವರಾಗಿಯೂ, ಕೇಳುವವರಾಗಿಯೂ, ಇರುವರು" ಎಂದು ವ್ಯವಹಾರ ಸ್ಥಿತಿಯನ್ನೂ ಶ್ರುತಿಯು ತಿಳಿಸುತ್ತದೆ.

"ಸ್ವಾತ್ಮಸಾಕ್ಷಾತ್ಕಾರವಾದ ಕೂಡಲೇ ಸರ್ವಭೂತಗಳೂ ಆತ್ಮವೇ ಆಗಲಾಗಿ ಆಗ ಮೋಹವೆಲ್ಲಿಯದು ? ಶೋಕವೆಲ್ಲಿಯದು ?" "ಈ ಪ್ರಪಂಚವೆಲ್ಲವೂ ಮನಸ್ಸಿನಿಂದಲೇ ವಿಜೃಂಭಿಸಿದೆ ಈ ಮನಸ್ಸು ಆತ್ಮನಲ್ಲಿ ಲಯವನ್ನು ಹೊಂದಿದರೆ ಕೂಡಲೆ ದ್ವೈತಾಭಾವವು ಸಿದ್ಧವಾಗುವುದು" "ಭಿನ್ನಭಿನ್ನವಾಗಿ ಕಾಣಬರುತ್ತಿರುವುದನ್ನೆಲ್ಲ ಇದು ಆತ್ಮನಲ್ಲ, ಎಂಬುದಾಗಿ ನಿಷೇಧಿಸುತ್ತಾ ಬಂದರೆ ಮನೋವೃತ್ತಿಯಿಂದ ಕಲ್ಪಿತವಾದ ಭೇದವೆಲ್ಲವೂ ಅಡಗಿ, ಕಡೆಗೆ ಅದ್ವೈತವು ಸಿದ್ಧವಾಗುವುದು" "ಸ್ವಪ್ನದಲ್ಲಿ ಮನಸ್ಸೊಂದೇ ನಾನಾ ಪ್ರಪಂಚರೂಪವಾಗಿ ಆಟವಾಡಿ ಮೆರೆದು, ಜಾಗ್ರತ್ತು ಬಂದಕೂಡಲೆ ಆ ಭೇದವೆಲ್ಲ ಅಡಗಿ ಹೇಗೆಶಾಂತವಾಗುವುದೋ, ಹಾಗೆಯೇ ಈ ಜಾಗ್ರತ್ಪ್ರಪಂಚವೂ ತಂಡೋಪತಂಡವಾಗಿ ಮೆರೆಯುತ್ತಿದ್ದರೂ, ಆತ್ಮಸಾಕ್ಷಾತ್ಕಾರವೆಂಬ ಜಾಗ್ರತ್ತು ಉಂಟಾದಕೂಡಲೇ, ನೀರಿನಲ್ಲಿ ಹಾಕಿದ ಉಪ್ಪಿನಗಡ್ಡೆಯಂತೆ ಕರಗಿಹೋಗುವುದು" ನಿರ್ಲಿಪ್ತನಾದ ಆ ವಿಷ್ಣು ಪರಮಾತ್ಮನೇ ಮಾಯೆಯೊಳಗೆ ಅಡಗಿ ಈಬಗೆಯಾಗಿ ಕಲ್ಪಿತವಾದ ಶರೀರವನ್ನು ಆಶ್ರಯಿಸಿ, ಸ್ತ್ರೀ, ಅನ್ನ, ಪಾನ ಮುಂತಾದ ವಿಚಿತ್ರಭೋಗಗಳಿಂದ ಸರ್ವವ್ಯವಹಾರವನ್ನೂ ಆಚರಿಸುತ್ತಿರುವವನಂತೆ ಇರುತ್ತಾನೆ, ಹೀಗೆ ಜಾಗ್ರತ್ತಿನಲ್ಲಿ ತೃಪ್ತಿಯನ್ನು ಹೊಂದುತ್ತಾನೆ, ಸ್ವಪ್ನದಲ್ಲಿಯೂ ಜೀವಭಾವದವನಾಗಿಯೇ ತನ್ನ ಮಾಯೆಯಿಂದ ಕಲ್ಪಿತದ ಆ ಪ್ರಪಂಚದಲ್ಲಿ ಸುಖದುಃಖಗಳನ್ನು ಅನುಭವಿಸುವನು, ಆ ಮೇಲೆ ಎಂದರೆ ಆ ಕನಸಿನ ಆಡಳಿತವೆಲ್ಲ ಅಡಗಿಹೋಗಲು ಗಾಢನಿದ್ರೆಯ ರೂಪವಾದ ಸುಷುಪ್ತಿಯಲ್ಲಿ ತಾನು ಸುಖಸ್ವರೂಪನೆಂಬುದು ಅರಿವಿಗೆಬಾರದ ಕೇವಲ ಅಜ್ಞಾನದ ಹೊದಿಕೆಯಿಂದ ಸುಖರೂಪದಲ್ಲಿರುವನು, ಬಳಿಕ

ಜನ್ಮಾಂತರದ ಕರ್ಮಸಂಬಂಧದಿಂದ ಎಚ್ಚೆತ್ತು ಜೀವನೆಂಬ ವ್ಯವಹಾರಕ್ಕೆ ಒಳಗಾಗುವನು, ಹೀಗೆ ಮೂರು ನೆಲೆಗಳಲ್ಲಿ ಯಾವನು ಆಟವಾಡುತ್ತಾನೆಯೋ ಅವನಿಂದಲೇ ಈ ವಿಚಿತ್ರವಾದ ಜಗತ್ತು ಉಂಟಾಗಿದೆ" ಎಂದು ಶ್ರುತಿಯು ಅಭೇದವನ್ನು ವಿವರಿಸುತ್ತಿದೆ. ಇದರ ತತ್ವವು ಶ್ರವಣಮನನಾದಿಗಳಿಂದ ಆತ್ಮಸಾಕ್ಷಾತ್ಕಾರವನ್ನು ಪಡೆದಿರುವ ಯೋಗಿಗಳಿಗೆ ಚೆನ್ನಾಗಿ ಅನುಭವಕ್ಕೆ ಬರುತ್ತದೆ. ಮತ್ತು:—"ವಿಷ್ಣುವೊಬ್ಬನೇ ಜಗತ್ತನ್ನು ಹರಡಿರುವನು, ಜ್ಞಾನಿಗಳಾದವರು ಇದರ ತತ್ವವನ್ನು ಅರಿಯಬೇಕು, "ಎಲೈ ಮೊಗುವೆ! ಜಗನ್ನಾಥನಾದ ಗೋವಿಂದನು ಸರ್ವಜಗನ್ಮಯನಾಗಿರುತ್ತಿರಲಾಗಿ ಇವರು ಮಿತ್ರರು, ಇವರು ಅಮಿತ್ರರು ಎಂಬ ಕಥೆಯೆಲ್ಲಿಯದು?" "ಆ ಪರಮಾತ್ಮನೇ ನೀನಾಗಿದ್ದೀಯೆ" "ಈ ಆತ್ಮನೇ ಬ್ರಹ್ಮ" ಇತ್ಯಾದಿ ಮಹಾವಾಕ್ಯಗಳು ಬ್ರಹ್ಮಭಿನ್ನವಸ್ತುವಿಲ್ಲವೆಂದು ತಿಳಿಸುತ್ತಿವೆ. ಇಂತಹ ವಾಕ್ಯಗಳನ್ನು ನಂಬದಿದ್ದರೆ

"ಅಶ್ರದ್ದಧಾನಾಃ ಪುರುಷಾಃ ಧರ್ಮಸ್ಯಾಸ್ಯ ಪರಂತಪ।
ಅಪ್ರಾಪ್ಯ ಮಾಂ ನಿವರ್ತಂತೆ ಮೃತ್ಯು ಸಂಸಾರ ವರ್ತ್ಮನಿ॥

ಎಲೈ ಪರಂತಪನಾದ ಅರ್ಜುನ! ಈವಿಧವಾದ ಉಪನಿಷದರ್ಥವನ್ನು ಯಾರು ನಂಬುವುದಿಲ್ಲವೋ ಅಂಥವರು ನನ್ನನ್ನು ಹೊಂದದೆಯೇ ಮೃತ್ಯುರೂಪವಾದ ಸಂಸಾರಮಾರ್ಗದಲ್ಲಿ ತೊಳಲುತ್ತಿರುವರು, ಎಂದು ಗೀತಾಚಾರ್ಯನು ಉದಹರಿಸಿದಾನೆ. ಮತ್ತು ಆತ್ಮತತ್ವವನ್ನು ಅರಿಯದವರು ಸೂರ್ಯಪ್ರಕಾಶವಿಲ್ಲದೆ ಕೇವಲ ಅಂಧತಮಸ್ಸಿನಿಂದ ನಿಬಿಡವಾಗಿರುವ ಲೋಕಗಳನ್ನು ಸೇರಿ ಆತ್ಮಘಾತುಕರೆನಿಸಿಕೊಳ್ಳುವರು ಎಂತಲೂ,ಹಿಂದೆ ಹೇಳಿದಪ್ರಕಾರವಲ್ಲದೆ ಪರಮಾತ್ಮನನ್ನು ಬೇರೆ ವಿಧವಾಗಿ ತಿಳಿಯುವವರಾದರೆ

"ಯೋನ್ಯಥಾ ಸಂತ ಮಾತ್ಮಾನ ಮನ್ಯಥಾ ಪ್ರತಿಪದ್ಯತೆ।
ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ॥

ಯಾವನು- ಒಂದು ಬಗೆಯಾಗಿರುವ ಆತ್ಮನನ್ನು ಬೇರೊಂದು ವಿಧವಾಗಿ ಇರತಕ್ಕವನನ್ನಾಗಿ ತಿಳಿಯುತ್ತಾನೆಯೋ ಅವನು ಕಳ್ಳನು, ಅವನೇ ಆತ್ಮಾಪಹಾರಿ, ಅವನೇ ಎಲ್ಲಪಾಪಗಳನ್ನೂ ಆಚರಿಸಿದವನು ಎಂತಲೂ ತಿಳಿಯಬೇಕು, ಎಂದು ಅನೇಕವಚನಗಳು ತಿಳಿಸುತ್ತಿವೆ.

ಇನ್ನು ಪ್ರಕೃತವನ್ನು ಅನುಸರಿಸೋಣ.—

"ವೇದಗಳು, ದೇವತೆಗಳೂ ಯಾವ ನಿರ್ಮಲವಾದ ತೀರ್ಥದಲ್ಲಿ ಪವಿತ್ರತರವಾದ ಏಕೀಭಾವವನ್ನು ಹೊಂದುತ್ತಾರೆಯೋ ಅವೇ ಮನೋಮಯವಾದ ತೀರ್ಥ. ಅಲ್ಲಿ ಸ್ನಾನಮಾಡಿದವನು ಅಮೃತತ್ವವನ್ನು ಪಡೆಯುವನು,

"ಎಲೈ ಪಾಂಡುಪುತ್ರನಾದ ಧರ್ಮರಾಜ! ರಾಗದ್ವೇಷಗಳೆಂಬ ಕೊಳೆಯಿಲ್ಲದೆ, ಧ್ಯಾನವೆಂಬ ಜಲದಿಂದ ತುಂಬಿರುವ ಜ್ಞಾನರೂಪವಾದ ಮಡುವಿನಲ್ಲಿ ಸ್ನಾನವಾಡಿದವನು ಪರಮಪದವನ್ನು ಹೊಂದುತ್ತಾನೆ" ಮತ್ತು "ನಿಯಮವೆಂಬ ನೀರಿನಿಂದ ತುಂಬಿದ ಆತ್ಮನೆಂಬ ನದಿಯುಂಟು, ಅದರಲ್ಲಿ ಸತ್ಯವೆಂಬುದೇ ಹಳ್ಳ, ಸದಾಚಾರವೆಂಬುದೇದಡ, ದಯೆಯೇ ಅಲೆ, ಓ ಪಾಂಡುನಂದನಾ! ಅದರಲ್ಲಿ ಅವಗಾಹನಮಾಡು, ಅಂತರಾತ್ಮವು ಅದರಿಂದ ಶುದ್ಧವಾಗುವುದಲ್ಲದೆ ಲೋಕಸಿದ್ಧವಾದ ಜಲದಿಂದ ಆಗುವುದಿಲ್ಲ" (ಮಹಾಭಾರತ.)

"ವಿಷ್ಣುಚಿಂತನವೇ ಮಾನಸಸ್ನಾನ" (ವಿಷ್ಣುಸ್ಮೃತಿ) "ಬ್ರಾಹ್ಮಣನು ಜಪದಿಂದಲೇ ಸಿದ್ಧನಾಗುವನು ಬೇರಾವಕರ್ಮವನ್ನು ಮಾಡಿದರೂ ಸರಿ, ಬಿಟ್ಟರೂಸರಿ ಅದರಿಂದ ದೋಷವಿಲ್ಲ."

"ಶ್ರೀಮನ್ನಾರಾಯಣ ಮಂತ್ರಜಪವೇ ಸರ್ವೋತ್ತಮವಾದ ಧರ್ಮವೆನಿಸಿದೆ. ಈ ವಿಧವಾದ ಜಪ ಯಜ್ಞವು ಅಹಿಂಸೆಯಿಂದುಂಟಾಗತಕ್ಕದು." ಆದುದರಿಂದಲೇ "ಯಜ್ಞಗಳೊಳಗೆಲ್ಲ ಜಪ ಯಜ್ಞವು ನಾನಾಗಿದೇನೆ" ಎಂದು ಶ್ರೀಕೃಷ್ಣಸೂಕ್ತಿಯು, ಇದಲ್ಲದೆ—ಒಳಗೆ ಅಪವಿತ್ರನೇ ಆಗಿರಲಿ, ಹೊರಗೆ ಪವಿತ್ರನೇ ಆಗಿರಲಿ, ಯಾವವಿಧವಾದ ಅವಸ್ಥೆಯನ್ನು ಹೊಂದಿದವನೇ ಆಗಿರಲಿ, ಯಾವನು ಪುಂಡರೀಕಾಕ್ಷನನ್ನು ಸ್ಮರಿಸುವನೋ ಅವನು ಒಳಗೂ ಹೊರಗೂ ಪವಿತ್ರತೆಯನ್ನು ಹೊಂದಿ ಶುಚಿ ಎನಿಸುವನು.

ಹಿಂದೆ ಹೇಳಿದಂತೆ ಜಪ ಧ್ಯಾನಗಳಿಗೆ ಗುರಿಯಾದ ಯಾವ ಒಬ್ಬ ದೇವರುಂಟೋ ಆ ದೇವರ ಲಕ್ಷಣವನ್ನು ತಿಳಿಸುತ್ತೇನೆ ಕೇಳು:—



"ಯುತ ಸ್ಸರ್ವಾಣಿ ಭೂತಾನಿ ಭವನ್ತ್ಯಾದಿ ಯುಗಾಗಮೆ ।
ಯಸ್ಮಿಂಶ್ಚ ಪ್ರಳಯಂ ಯಾಂತಿ ಪುನರೇವ ಯುಗಕ್ಷಯೆ" ॥೧೧॥
" ತಸ್ಯ ಲೋಕಪ್ರಧಾನಸ್ಯ ಜಗನ್ನಾಥಸ್ಯ ಭೂಪತೇ ।
ವಿಷ್ಣೋರ್ನಾಮಸಹಸ್ರಂ ಮೆ ಶೃಣು ಪಾಪ ಭಯಾಪಹಂ" ॥೧೭॥
" ಯಾನಿ ನಾಮಾನಿ ಗೌಣಾನಿ ವಿಖ್ಯಾತಾನಿ ಮಹಾತ್ಮನಃ ।
ಋಷಿಭಿಃ ಪರಿಗೀತಾನಿ ತಾನಿ ವಕ್ಷ್ಯಾಮಿ ಭೂತಯೆ" ॥ ॥೧೩॥

---

ಯಾವುದು ಮೊದಲನೆಯ ಯುಗಾರಂಭದಲ್ಲಿ ಸರ್ವಭೂತಗಳೂ ಉಂಟಾಗಿ ಮರಳಿ ಮಹಾಪ್ರಳಯದೊಳಗೆ ಯಾವನಲ್ಲಿ ವಿಲಯವನ್ನು ಪಡೆಯುತ್ತವೆಯೋ, ॥೧೧॥

ಎಲೈ ಭೂಪತಿಯೇ! ಲೋಕೋತ್ತರನೆನಿಸಿದ ಆ ಜಗನ್ನಾಥನಾದ ವಿಷ್ಣುವಿನ ನಾಮಸಹಸ್ರವು ಸರ್ವಪಾಪಭಯವನ್ನು ಪರಿಹರಿಸತಕ್ಕದಾಗಿದೆ, ಅದನ್ನು ಹೇಳುತ್ತೇನೆ ಕೇಳು ಎಂದು ಭೀಷ್ಮಾಚಾರ್ಯನಿಂತೆಂದನು. — ॥೧೭॥

ಅಯ್ಯಾ ಧರ್ಮನಂದನ! ವ್ಯಾವಹಾರಿಕವಾಗಿರುವ ವಿಚಿತ್ರಗುಣಗಳ ಸಂಬಂಧದಿಂದ ಭಗವಂತನ ಯಾವಯಾವ ನಾಮಗಳು ಲೋಕದಲ್ಲಿ ಪ್ರಖ್ಯಾತಗಳಾಗಿವೆಯೋ ಮತ್ತು ಮಹರ್ಷಿಗಳಿಂದ ಅನೇಕವಿಧವಾಗಿ ಜಪಿಸಲ್ಪಟ್ಟವೆಯೋ, ಅವುಗಳನ್ನೆಲ್ಲ ಶ್ರೇಯಃಪ್ರಾಪ್ತಿಗೋಸ್ಕರ ಹೇಳುತ್ತೇನೆ, ॥೧೩॥

ಆದರೆ-ಪರಮಾತ್ಮನು ಭೂತಾತ್ಮನೆಂತಲೂ, ಇಂದ್ರಿಯಾತ್ಮನೆಂತಲೂ, ಪ್ರಧಾನಾತ್ಮನೆಂತಲೂ, ಆತ್ಮನೆಂತಲೂ, ಪರಮಾತ್ಮನೆಂತಲೂ ಐದುಬಗೆಯಾಗಿದಾನೆ ಅದುದರಿಂದಲೇ—

" ಜ್ಯೋತೀಂಷಿ ವಿಷ್ಣು ರ್ಭುವನಾನಿ ವಿಷ್ಣು ರ್ವನಾನಿ ವಿಷ್ಣುಃಗಿರಯೊ ದಿಶಶ್ಚ । ನದ್ಯಸ್ಸಮುದ್ರಾಶ್ಚ ಸ ಏವ ಸರ್ವಂ ಯದಸ್ತಿ ಯನ್ನಾಸ್ತಿ ಚ ವಿಪ್ರವರ್ಯ" ॥ ವಿಷ್ಣುಪುರಾಣ

ತೇಜೋರೂಪವಸ್ತುಗಳು, ಲೋಕಗಳು, ವನಗಳು, ಗಿರಿಗಳು, ದಿಕ್ಕುಗಳು, ನದಿಗಳು, ಸಮುದ್ರಗಳು, ವ್ಯಕ್ತವಾಗಿರತಕ್ಕವುಗಳು ಮತ್ತು ಅವ್ಯಕ್ತವಾಗಿರತಕ್ಕವುಗಳು ಇವುಗಳೆಲ್ಲವೂ ವಿಷ್ಣುವೇ ಅಲ್ಲದೆ ಬೇರಲ್ಲ

(ಋಷಿರ್ನಾಮ್ನಾಂ ಸಹಸ್ರಸ್ಯ ವೇದವ್ಯಾಸೋ ಮಹಾಮುನಿಃ |
ಛಂದೋನುಷ್ಟುಪ್ತಥಾ ದೇವೋ ಭಗವಾನ್ದೇವಕೀಸುತಃ || ೧೪

ಅಮೃತಾಂಶೂದ್ಭವೋಬೀಜಂ ಶಕ್ತಿರ್ದೇವಕಿನಂದನಃ |
ತ್ರಿಸಾಮಾಹೃದಯಂ ತಸ್ಯ ಶಾಂತ್ಯರ್ಥೇವಿನಿಯುಜ್ಯತೇ||) ೧೫

ವಿಷ್ಣುಂ ಜಿಷ್ಣುಂ ಮಹಾವಿಷ್ಣುಂ ಪ್ರಭವಿಷ್ಣುಂ ಮಹೇಶ್ವರಮ್ |
ಅನೇಕರೂಪ ದೈತ್ಯಾಂತಂ ನಮಾಮಿ ಪುರುಷೋತ್ತಮಂ || ೧೬

---

ಆದುದರಿಂದಲೇ ಆತನ ದಿವ್ಯನಾಮಾಮೃತವನ್ನು ಶ್ರೋತ್ರಪಾತ್ರೆಯಿಂದ ಪಾನಮಾಡು

ವೈಶಂಪಾಯನಮುನಿಯು ಜನಮೇಜಯನಿಗೆ ಹೇಳುತ್ತಾನೆ:—

ಈ ನಾಮ ಸಹಸ್ರಕ್ಕೆ ವೇದವ್ಯಾಸರೇ ಪ್ರವರ್ತಕರಾದ ಮಹರ್ಷಿಗಳು (ಮನನಮಾಡಿದವರು) ಈ ಸಹಸ್ರನಾಮದ ಪದ್ಯಗಳೆಲ್ಲ ಅನುಷ್ಟುಪ್ ವೃತ್ತದಲ್ಲಿವೆ. ಈ ನಾಮಗಳಿಗೆಲ್ಲ ಪರಮಾತ್ಮನಾದ ಶ್ರೀಮನ್ನಾರಾಯಣನೇ ದೇವತೆ, ||೧೪||

ಚಂದ್ರನಿಗೆ ಉತ್ಪತ್ತಿಸ್ಥಾನವಾದ ಸೂರ್ಯನೇ ಬೀಜವು (ಪ್ರಕಾಶಕ)ನಾಮಗಳಿಗೆ ಬಗೆಬಗೆಯ ಅರ್ಥವನ್ನುಂಟುಮಾಡುವ ಶಕ್ತಿಯು ದೇವಕೀಪುತ್ರನೇ. ಭಕ್ತಿಜ್ಞಾನ ವಿರಕ್ತಿಗಳ ಸಮತೆಯೇ ಸಹಸ್ರನಾಮಹೃದಯ (ತತ್ವ) ಸಹಸ್ರನಾಮಗಳಿಗೂ ಸರ್ವದುಃಖಗಳ ಪರಿಹಾರದಲ್ಲಿಯೇ ವಿನಿಯೋಗ (ಪ್ರಯೋಜನ) ||೧೫||

ವ್ಯಾಪಕನು, ಜಯಶಾಲಿಯು, ಮಹೋನ್ನತನು, ಸರ್ವಶಕ್ತನು, ಸರ್ವನಿಯಾಮಕನು, ವಿಘ್ನಕಾರಿಗಳಾದ ಬಗೆಬಗೆಯ ರಾಕ್ಷಸರನ್ನೆಲ್ಲ ನಾಶಗೊಳಿಸುವವನೂ ಆಗಿರುವದರಿಂದಲೇ ಪುರುಷೋತ್ತಮನೆನಿಸಿರುವ ಆ ಶ್ರೀಹರಿಯನ್ನು ವಂದಿಸುವೆನು, ||೧೬||

( ಅರ್ಧಚಂದ್ರರೇಖಾಂಕದಲ್ಲಿ ಹೇಳಿರುವಂತೆ ಅಂಗನ್ಯಾಸಕರನ್ಯಾಸಾದಿಗಳನ್ನು ಮಾಡಬೇಕು, ಈ ನ್ಯಾಸಕ್ರಮವನ್ನು ಮಂತ್ರಪಾಠಕ್ಕೆ ಪೂರ್ವದಲ್ಲಿಯೂ ಪರದಲ್ಲಿಯೂ ಆಚರಿಸುವದರಿಂದ ಶ್ರೀ ವಿಷ್ಣು ಸಾಲಗ್ರಾಮಕ್ಕೆ ಪೂರ್ವೋತ್ತರ ಸಂಪುಟಗಳಂತೆ ರಕ್ಷಕಗಳಾಗಿರತಕ್ಕವುಗಳೆಂದರಿಯಬೇಕು. ನ್ಯಾಸರಹಸ್ಯವನ್ನು ಗುರುಮುಖದಿಂದಲೇ ತಿಳಿಯತಕ್ಕದ್ದು)

ಕ್ಷೀರೋದನ್ವತ್ಪ್ರದೇಶೆ ಶುಚಿಮಣಿ ವಿಲಸತ್ಸೈಕತೆ ಮೌಕ್ತಿಕಾನಾಂ ಮಾಲಾಕ್ಲುಪ್ತಾಸನಸ್ಥಃಸ್ಫಟಿಕಮಣಿ ನಿಭೈ ಮೌಕ್ತಿಕೈ ರ್ಮಂಡಿತಾಂಗಃ । ಶುಭ್ರೈ ರಭ್ರೈರದಭ್ರೈರುಪರಿವಿರಚಿತೈರ್ಮುಕ್ತಪೀಯೂಷವರ್ಷೈರಾನಂದೀನಃ ಪುನೀಯಾದರಿ ನಳಿನ ಗದಾಶಙ್ಖಪಾಣಿರ್ಮುಕುನ್ದಃ ॥ ॥೧॥

ಭೂಃಪಾದೌ ಯಸ್ಯನಾಭಿರ್ವಿಯದಸುರ ನಿಲಶ್ಚನ್ದ್ರ ಸೂರ್ಯೌಚನೇತ್ರೆ ಕರ್ಣಾವಾಶಾಶ್ಶಿರೋದ್ಯೌರ್ಮುಖಮಪಿದಹನೋಯಸ್ಯ ವಾಸ್ತೇಯಮಬ್ಧಿಃ ಅಂತಸ್ಥಂಯಸ್ಯವಿಶ್ವಂ ಸುರನರ ಖಗಗೋಭೋಗಿಗಂಧರ್ವದೈತ್ಯೈಶ್ಚಿತ್ರಂ ರಂರಮ್ಯತೇತಂತ್ರಿಭುವನವಪುಷಂವಿಷ್ಣುಮೀಶಂನಮಾಮಿ ॥ ॥೨॥

ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ ವಿಶ್ವಾಧಾರಂ

---

ಕ್ಷೀರಸಮುದ್ರದ ದಡದಲ್ಲಿ ಶುದ್ಧಮುಕ್ತಾ ಮಣಿಮಯವಾದ ಮರಳು ದಿಣ್ಣೆಯ ಮೇಲೆ ದಿವ್ಯ ಮಾಲಿಕೆಗಳಿಂದ ಅಲಂಕೃತವಾದ ಸಿಂಹಾಸನವನ್ನಲಂಕರಿಸಿ, ಸ್ಫಟಿಕ ಶಿಲೆಗಳಂತೆ ಹೊಳೆಯುತ್ತಿರುವ ಮುಕ್ತಾಹಾರಾದಿಗಳಿಂದ ಅಲಂಕೃತನಾಗಿ, ಮೇಲುಗಡೆಯಲ್ಲಿ ಶುಭ್ರಗಳಾಗಿಯೂ ಅಪಾರಗಳಾಗಿಯೂ ಇರುವ ದಿವ್ಯ ಮೇಘಗಳ ಅಮೃತವೃಷ್ಟಿಯಿಂದಆನಂದಿಸುತ್ತಾ ಚಕ್ರ, ಪದ್ಮ, ಗದೆ, ಶಂಖ, ಇವುಗಳನ್ನು ಹಸ್ತಗಳಿಂದ ಧರಿಸಿರುವ ಮುಕುಂದನು ನಮ್ಮನ್ನು ರಕ್ಷಿಸಲಿ. ॥೧॥

ಯಾವ ಪರಮಾತ್ಮನಿಗೆ ಭೂಮಿಯೇ ಪಾದವೋ, ಆಕಾಶವು ನಾಭಿಯೊ, ವಾಯುವು ಪ್ರಾಣವೊ, ಚಂದ್ರಸೂರ್ಯರೇ ಕಣ್ಣುಗಳೊ, ದಿಕ್ಕುಗಳು ಕಿವಿಗಳೋ, ದ್ಯುಲೋಕವು ಶಿರಸ್ಸೋ, ಅಗ್ನಿಯು ಮುಖವೋ, ಸಮುದ್ರವು ಹೊಕ್ಕಳಿನ ಕೆಳಭಾಗವೋ, ಸಮಸ್ತ ಪ್ರಪಂಚವು ಯಾವನ ಉದರದಲ್ಲಿ ಅಡಗಿದೆಯೊ, ಸುರರು, ನರರು, ಪಕ್ಷಿಗಳು, ಪಶುಗಳು, ಸರ್ಪಗಳು, ಗಂಧರ್ವರು, ದೈತ್ಯರು ಈ ಮೊದಲಾದವರಿಂದ ಯಾವ ಪರಮಾತ್ಮನು ವಿಚಿತ್ರರೂಪದಿಂದ ಸೇವಿಸಲ್ಪಡುತ್ತಾನೆಯೋ, ಮೂಲೋಕಸ್ವರೂಪನಾಗಿರುವ ಅಂತಹ ಶ್ರೀ ಕೃಷ್ಣಪರಮಾತ್ಮನನ್ನು ನಮಸ್ಕರಿಸುತ್ತೇನೆ. ॥೨॥

ಶಾಂತಾಕಾರನು, ಶೇಷಶಾಯಿಯು, ಕಮಲನಾಭನು, ಸುರನಾಥನು

ಗಗನಸದೃಶಂ ಮೇಘವರ್ಣಂ ಶುಭಾಙ್ಗಮ್ । ಲಕ್ಷ್ಮೀಕಾಂತಂ ಕಮಲನಯನಂ ಯೋಗಿಹೃದ್ಧ್ಯಾನಗಮ್ಯಂ ವಂದೇವಿಷ್ಣುಂ ಭವ ಭಯ ಹರಂ ಸರ್ವ ಲೋಕೈಕ ನಾಥಮ್ ॥ ॥೩॥

ಮೇಘಶ್ಯಾಮಂ ಪೀತ ಕೌಶೇಯ ವಾಸಂ ಶ್ರೀವತ್ಸಾಂಕಂ ಕೌಸ್ತುಭೋದ್ಭಾಸಿತಾಂಗಂ। ಪುಣ್ಯೋಪೇತಂ ಪುಂಡರೀಕಾಯತಾಕ್ಷಂ ವಿಷ್ಣುಂ ವಂದೇ ಸರ್ವಲೋಕೈಕನಾಥಂ ॥ ॥೪॥

ಸಶಙ್ಖಚಕ್ರಂ ಸಕಿರೀಟಕುಂಡಲಂ ಸಪೀತವಸ್ತ್ರಂ ಸರಸೀರುಹೇಕ್ಷಣಮ್ ।ಸಹಾರ ವಕ್ಷಃಸ್ಥಲ ಶೋಭಿಕೌಸ್ತುಭಂ ನಮಾಮಿ ವಿಷ್ಣುಂ ಶಿರಸಾ ಚತುರ್ಭುಜಮ್ ॥ ॥೫॥

---

ಪ್ರಪಂಚಾಕಾರನು, ಆಕಾಶದಂತೆ ಸೂಕ್ಷ್ಮನು ಅಥವಾ ವ್ಯಾಪಕನು, ಇಲ್ಲವೆ ನಿತ್ಯನು, ಮೇಘವರ್ಣನು, ಮಂಗಳಾಂಗನು, ಲಕ್ಷ್ಮೀ ವಲ್ಲಭನು, ಪದ್ಮನೇತ್ರನು, ಯೋಗಿಗಳ ಹೃದಯದ ಧ್ಯಾನಕ್ಕೆ ಗೋಚರನು, ಜನನ ಮರಣಗಳ ಭಯವನ್ನು ತೊಲಗಿಸುವವನು, ಸರ್ವಲೋಕಶರಣ್ಯನೂ ಆಗಿರುವ ಆ ಶ್ರೀ ವಿಷ್ಣು ಪರಮಾತ್ಮನನ್ನು ವಂದಿಸುವೆನು. ॥೩॥

ಮತ್ತು-ನೀಲಮೇಘಶ್ಯಾಮನು, ಪೀತಾಂಬರಧಾರಿಯು, ಎದೆಯಲ್ಲಿ ಶ್ರೀವತ್ಸನೆಂಬ ಮಚ್ಚೆಯನ್ನುಳ್ಳವನು, ಕೌಸ್ತುಭರತ್ನದಿಂದ ಬೆಳಗುವ ವಿಗ್ರಹವುಳ್ಳವನು, ಪುಣ್ಯವಂತರಿಂದ ಸೇವಿಸಲ್ಪಡುವವನು, ಬೆಳ್ದಾವರೆಯಂತೆ ಅಗಲವಾದ ಕಣ್ಣುಗಳುಳ್ಳಾತನು, ಸರ್ವಲೋಕೇಶ್ವರನೂ ಆಗಿರುವ ಆ ಶ್ರೀವಿಷ್ಣು ಪರಮಾತ್ಮನನ್ನು ವಂದಿಸುತ್ತೇನೆ ॥೪॥

ಶಂಖಚಕ್ರಪಾಣಿಯು, ಕಿರೀಟ ಕುಂಡಲಧಾರಿಯು, ಪೀತಾಂಬರಾಲಂಕೃತನು, ಪದ್ಮನೇತ್ರನು, ವೈಜಯಂತೀಹಾರ ಕೌಸ್ತುಭ ರತ್ನಗಳಿಂದ ಹೊಳೆಯುವ ಎದೆಯುಳ್ಳವನೂ ಆಗಿರುವ ಶ್ರೀ ಮಹಾ ವಿಷ್ಣುವನ್ನು ವಂದಿಸುವೆನು ಎಂದು ಪರಮ ಪುರುಷನನ್ನು ಧ್ಯಾನಿಸಿ, ಮಂತ್ರಪಾರಾಯಣವನ್ನು ಪಕ್ರಮಿಸಬೇಕು. ॥೫॥

—: ಓಂ :—

ವಿಶ್ವಂ ವಿಷ್ಣು ರ್ವಷಟ್ಕಾರೋ ಭೂತಭವ್ಯ ಭವತ್ಪ್ರಭುಃ ।
ಭೂತ ಕೃದ್ಭೂತಭೃದ್ಭಾವೋ ಭೂತಾತ್ಮಾ ಭೂತಭಾವನಃ ॥ ॥೧॥
ಪೂತಾತ್ಮಾ, ಪರಮಾತ್ಮಾಚ ಮುಕ್ತಾನಾಂ ಪರಮಾ ಗತಿಃ । [೧೦]
ಅವ್ಯಯಃ ಪುರುಷಸ್ಸಾಕ್ಷೀ ಕ್ಷೇತ್ರಜ್ಞೋಽಕ್ಷರ ಏವಚ ॥೨॥

---

ಓಂ ನಮೊ ನಾರಾಯಣಾಯ.

(ವಿಶ್ವಂ,) ಪ್ರಪಂಚರೂಪನಾಗಿಯೂ, ಪ್ರಪಂಚಕ್ಕೆ ಕಾರಣನಾಗಿಯೂ ಇರುವನು. (ವಿಷ್ಣುಃ) ದಿಗ್ದೇಶಕಾಲಗಳೊಳಗೆಲ್ಲ ವ್ಯಾಪಿಸಿ ತ್ರಿವಿಧ ಭೇದಶೂನ್ಯನಾಗಿರುವನು. (ವಷಟ್ಕಾರಃ) ಯಜ್ಞಸ್ವರೂಪನು, ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವ ಮಂತ್ರರೂಪನು, ಸರ್ವನಿಯಾಮಕನು. [ಭೂತಭವ್ಯಭವತ್ಪ್ರಭುಃ,] ಮೂರುಕಾಲದಲ್ಲಿನ ಜಗತ್ತಿಗೂ ಸ್ವಾಮಿಯಾದವನು. (ಭೂತಕೃತ್) ರಜೋಗುಣ ಬ್ರಹ್ಮರೂಪದಿಂದ ಭೂತಗಳನ್ನು ಸೃಷ್ಟಿಸಿ, ತಮೋಗುಣ ರುದ್ರರೂಪದಿಂದ ನಾಶಗೊಳಿಸುವ ನಾರಾಯಣನು. (ಭೂತಭೃತ್) ಸತ್ವಗುಣಾಶ್ರಯದಿಂದ ಭೂತಗಳಿಗಾಧಾರನಾಗಿ ಪಾಲಿಸುತ, ಅರಗಳಿಗೆ ಕುಂಬದ ಮಗವು ಹೇಗೋ ಹಾಗೆ ಸರ್ವಾಶ್ರಯನಾಗಿರುವನು. (ಭಾವಃ) ಪ್ರಪಂಚರೂಪದಿಂದಾವಿರ್ಭವಿಸುವನು. (ಭೂತಾತ್ಮಾ) ಸರ್ವಭೂತಾಂತರ್ಯಾಮಿಯಾದವನು. (ಭೂತಭಾವನಃ) ಸಕಲಭೂತಗಳನ್ನುಂಟುಮಾಡಿ ಬಳೆಯಿಸುವ [ವೃದ್ಧಿಗೊಳಿಸುವ] ನು. (ಪೂತಾತ್ಮಾ) ಜನ್ಮಗುಣಕರ್ಮಸಂಬಂಧವಿಲ್ಲದೆ ಪವಿತ್ರಾತ್ಮ ಸ್ವರೂಪನಾದವನು. (೧೦)

(ಪರಮಾತ್ಮಾ) ಕಾರ್ಯಕಾರಣಗಳಿಗೆ ವಿಲಕ್ಷಣನಾಗಿ ನಿತ್ಯಶುದ್ಧಬುದ್ಧಮುಕ್ತಸ್ವರೂಪನಾದವನು. (ಮುಕ್ತಾನಾಂಪರಮಾಗತಿಃ) ಮುಕ್ತರಿಗೆ ಪುನರಾವೃತ್ತಿರಹಿತವಾದ ಗತಿಯಾಗಿರುವನು. (ಅವ್ಯಯಃ) ವಿಕಾರವಿನಾಶಗಳಿಲ್ಲದೆ ತನ್ನನ್ನು ಸೇರಿದವರನ್ನು ಹಿಂದಕ್ಕೆ ಕಳುಹಿಸದಿರುವನು. (ಪುರುಷಃ) ಹೃದಯಗುಹೆಯಲ್ಲಿ ಮಲಗಿರುವ, ವಾ, ಪೂರ್ಣಭಾವದಿಂದ ಇರುವ, ವಾ, ಉತ್ಕೃಷ್ಟವಸ್ತುಗಳಲ್ಲಿರುವ, ವಾ, ಉತ್ತಮಫಲಗಳನ್ನು ಕೊಡುವ, ವಾ, ಭುವನಗಳೆಂಬ ಪುರಗಳನ್ನು ಸಂಹಾರ ಸಮಯದಲ್ಲಿ ಲಯಗೊಳಿಸುವ, ವಾ, ಸರ್ವ ರೂಪದಿಂದ ಪೂರ್ಣನಾಗಿರುವನು.

ಯೋಗೋ ಯೋಗವಿದಾಂ ನೇತಾ ಪ್ರಧಾನ ಪುರುಷೇಶ್ವರಃ, । [೨೦]
ನಾರಸಿಂಹವಪುಃ ಶ್ರೀಮಾನ್ ಕೇಶವಃ ಪುರುಷೋತ್ತಮಃ ॥೩॥
ಸರ್ವಃ ಶರ್ವಃ ಶಿವಸ್ಥಾಣುಃ ಭೂತಾದಿ ರ್ನಿಧಿರವ್ಯಯಃ,। [೩೦]

(ಸಾಕ್ಷೀ)ಮರೆಯಿಲ್ಲದೆ ಎದುರಿಗಿರುವಂತೆ ಎಲ್ಲವನ್ನೂ ನೋಡುತ್ತಿರುವವನು. (ಕ್ಷೇತ್ರಜ್ಞಃ) ಶರೀರದಲ್ಲಿದ್ದು ಎಲ್ಲವನ್ನೂ ತಿಳಿದುಕೊಳ್ಳುತ್ತಿರುವವನು. (ಅಕ್ಷರಃ) ದೇಹದಲ್ಲಿ ಎಲ್ಲವನ್ನೂ ಅನುಭವಿಸುವವನಂತಿದ್ದು ನಾಶರಹಿತನಾದವನು. (ಯೋಗಃ) ಮನಸ್ಸಿನೊಡನೆ ಇಂದ್ರಿಯಗಳನ್ನೆಲ್ಲ ನಿಗ್ರಹಿಸಿ ಏಕತ್ವಭಾವನೆಯಿಂದ ಧ್ಯಾನಿಸುವವರಿಗೆ ಲಭಿಸುವವನು. ಅಥವಾ ಮುಕ್ತರಿಗೆ ಪ್ರಾಪ್ಯನಾದವನು. (ಯೋಗವಿದಾಂನೇತಾ) ಯೋಗವಿಚಾರ ಮಾಡಿ ತಿಳಿದು, ಅಭ್ಯಸಿಸುವವರ ಯೋಗಕ್ಷೇಮವನ್ನು ವಹಿಸುವನು. (ಪ್ರಧಾನಪುರುಷೇಶ್ವರಃ) ಪ್ರಧಾನವೆಂಬ ಪ್ರಕೃತಿಗೂ, ಪುರುಷನೆಂಬ ಜೀವನಿಗೂ ಸ್ವಾಮಿಯಾದವನು. (೨೦)

(ನಾರಸಿಂಹವಪುಃ) ನರನ, ಮತ್ತು ಸಿಂಹದ ಅವಯವಗಳುಳ್ಳ ಆಕೃತಿಯನ್ನು ಧರಿಸಿದವನು. (ಶ್ರೀಮಾನ್) ನಿತ್ಯಶ್ರೀಮಂತನಾದವನು. (ಕೇಶವಃ) ಅಂದವಾದ ಕೇಶಗಳುಳ್ಳ, ವಾ. ಕೇಶಿ, ಎಂಬ ರಕ್ಕಸನನ್ನು ಕೊಂದ, ವಾ, ತ್ರಿಮೂರ್ತಿಗಳನ್ನೊಳಗೊಂಡಿರುವ, ವಾ, ಕ,-ಬ್ರಹ್ಮ, ಅ,-ವಿಷ್ಣು ಈಶ-ಶಿವ ಇವರನ್ನೊಳಗೊಂಡವನು. (ಪುರುಷೋತ್ತಮಃ) ಪುರುಷರೊಳಗೆಲ್ಲ ಉತ್ತಮನಾದ, ವಾ, ನಾಶವಾಗುವ ಭೂತಗಳಿಗಿಂತಲೂ ನೆಲೆಯಾಗಿರುವ, ಜೀವನಿಗಿಂತಲೂ ಮೇಲೆಂದು ಲೋಕ ಮತ್ತು ವೇದಗಳಲ್ಲಿ ಪ್ರಸಿದ್ಧನಾದವನು. (ಸರ್ವಃ) ವ್ಯಕ್ತಾವ್ಯಕ್ತನಾಮರೂಪಗಳನ್ನೊಳಗೊಂಡಿರುವ ಜಗತ್ತನ್ನು ಸೃಷ್ಟಿಸುವ, ಲಯಗೊಳಿಸುವ, ಜ್ಞಾನದಿಂದೊಡಗೂಡಿ ಸರ್ವ ಸ್ವರೂಪನಾದವನು. (ಶರ್ವಃ) ಸಂಹಾರಸಮಯದಲ್ಲಿ ಎಲ್ಲವನ್ನೂ ಲಯಗೊಳಿಸಿ, ಸ್ವಸ್ವರೂಪದಲ್ಲಿ ಅಡಗಿಸಿಕೊಂಬುವನು. (ಶಿವಃ) ಸತ್ವರಜಸ್ತಮೋಗುಣ ರಹಿತನೆನಿಸಿ ಮಂಗಳಸ್ವರೂಪನಾದವನು. (ಸ್ಥಾಣುಃ) ಅನುಗ್ರಹಿಸುವದರಲ್ಲಿ ಸ್ಥಿರನಾಗಿರುವನು. (ಭೂತಾದಿಃ) ಸರ್ವಭೂತಗಳಿಗೂ ಮೂಲಕಾರಣನಾದವನು. (ಅವ್ಯಯಃನಿಧಿಃ) ಪ್ರಳಯಕಾಲದೊಳಗೆ ಎಲ್ಲವನ್ನೂ ನಿಜಸ್ವರೂಪದಲ್ಲಿ ಅಡಗಿಸಿಕೊಳ್ಳುತ ನಾಶರಹಿತನೆನಿಸಿದ, ವಾ, ಧರ್ಮವನ್ನು ಸಾಧುಗಳನ್ನೂ ಉದ್ಧರಿಸಲಿಕ್ಕೆ ಆಗಾಗ್ಗೆ ಸ್ವೇಚ್ಛೆಯಿಂದ ಅವತರಿಸುವನು. (೩೦)

ಸಂಭವೋ ಭಾವನೋ ಭರ್ತಾ ಪ್ರಭವಃ ಪ್ರಭುರೀಶ್ವರಃ ॥೪॥
ಸ್ವಯಂ ಭೂ ಶ್ಶಂಭುರಾದಿತ್ಯಃ ಪುಷ್ಕರಾಕ್ಷೋ, ಮಹಾಸ್ವನಃ । [೪೦]
ಅನಾದಿ ನಿಧನೋ ಧಾತಾ ವಿಧಾತಾ ಧಾತುರುತ್ತಮಃ ॥೫॥
ಅಪ್ರಮೇಯೋ ಹೃಷೀಕೇಶಃ ಪದ್ಮನಾಭೋ ಮರಪ್ರಭುಃ ।

---

(ಸಂಭವಃ) ಭೋಕ್ತೃಗಳಿಗೆ ಸರ್ವಫಲದಾತೃವಾಗಿರುವನು. (ಭಾವನಃ) ಸರ್ವಕ್ಕೂ ಆಸರೆಯಾಗಿ ಎಲ್ಲವನ್ನೂ ಕಾಪಾಡುವನು. (ಭರ್ತಾ) ಎಲ್ಲ ಭೂತಗಳನ್ನೂ ಚೆನ್ನಾಗಿ ಸೃಷ್ಟಿಸುವ, ವಾ, ಅತ್ಯುತ್ತಮವಾದ ಅವತಾರವನ್ನು ಪಡೆಯುವನು. (ಪ್ರಭವಃ) ಸರ್ವಕ್ರಿಯೆಗಳಲ್ಲಿಯೂ ಸಾಮರ್ಥ್ಯವನ್ನು ಪಡೆದಿರುವನು. (ಪ್ರಭುಃ) ನಿರುಪಾಧಿಕವಾದ ಐಶ್ವರ್ಯವನ್ನು ಪಡೆದಿರುವನು. (ಈಶ್ವರಃ) ಸ್ವತಃ ಅವತರಿಸುವ, ವಾ, ಎಲ್ಲಕ್ಕಿಂತಲೂ ಮೇಲಿರುವ, ವಾ, ಎಲ್ಲವೂ ತಾನೇ ಆಗಿರುವ, ವಾ, ಎಲ್ಲದರ ರೂಪವನ್ನೂ ಪಡೆದಿರುವ, ವಾ, ಸ್ವತಂತ್ರನಾಗಿರುವನು. (ಸ್ವಯಂಭೂಃ) ತಾನಾಗಿ ಅವತರಿಸುವ, ವಾ, ಎಲ್ಲಕ್ಕಿಂತಲೂಮೇಲಿರುವ, ವಾ, ಎಲ್ಲವೂ ತಾನೇ ಆಗಿರುವವನು. (ಶಂಭುಃ) ಭಕ್ತರಿಗೆ ಸುಖವನ್ನು ಒದಗಿಸಿಕೊಡುವವನು. (ಆದಿತ್ಯಃ) ಆದಿತ್ಯಮಂಡಲದಲ್ಲಿ ಹಿರಣ್ಮಯಪುರುಷನೆನಿಸಿದ, ವಾ, ದ್ವಾದಶಾದಿತ್ಯರಲ್ಲಿ ವಿಷ್ಣುವೆಂಬ ಹೆಸರನ್ನುಪಡೆದಿರುವ, ವಾ, ಅದಿತಿ ಎಂಬ ಈ ಭೂಮಿಗೆ ಸ್ವಾಮಿಯಾದ,ವಾ, ಒಬ್ಬನೇ ಆಗಿರುವ, ವಾ, ಆದಿತ್ಯನು ಅನೇಕಜಲಾಶಯಗಳಲ್ಲಿಅನೇಕರಾಗಿ ಕಾಣಬರುವಹಾಗೆ ಒಬ್ಬನಾಗಿದ್ದರೂ ಎಲ್ಲದರಲ್ಲಿಯೂ ಅನೇಕಾಕಾರವಾಗಿ ಕಂಡುಬರುವನು. (ಪುಷ್ಕರಾಕ್ಷಃ) ಕೆಂದಾವರೆಯನ್ನು ಹೋಲುವ ಅಂದವಾದ ಕಣ್ಣುಗಳುಳ್ಳವನು. (೪೦)

(ಮಹಾಸ್ವನಃ) ಪೂಜ್ಯವಾದ ಧ್ವನಿಯುಳ್ಳ,ವಾ,ವೇದಶಬ್ದಗಳಿಂದ ಹೊಗಳಿಸಿಕೊಂಬ, ಅಥವಾ, ವೇದಕಾರಣನಾದವನು. (ಅನಾದಿನಿಧನಃ) ಆದ್ಯಂತಗಳಿಲ್ಲದವನು. (ಧಾತಾ) ಅನಂತಶೇಷಾದಿಗಳಿಗೂ ಆಧಾರನಾಗಿರುವ ಅಥವಾ ಅನಂತರೂಪದಿಂದ ಜಗತ್ತನ್ನು ಧರಿಸಿರುವನು. (ವಿಧಾತಾ)ಕರ್ಮಗಳಿಗೂ ಅವುಗಳಫಲಗಳಿಗೂ ಕರ್ತೃವೆನಿಸಿದವನು.(ಧಾತುರುತ್ತಮಃ) ಕಾರ್ಯಕಾರಣ ಕರ್ತೃವೆನಿಸಿದ ವಿರಿಂಚಿಗಿಂತಲೂ ಉತ್ತಮನೆನಿಸಿದವನು. (ಅಪ್ರಮೇಯಃ) ಸರ್ವಪ್ರಮಾಣಾತೀತನಾದ, ಎಂದರೆ

ವಿಶ್ವಕರ್ಮಾ, ಮನುಸ್ತ್ವಷ್ಟಾ ಸ್ಥವಿಷ್ಠಸ್ಥವಿರೋಧ್ರುವಃ [೫೦] ||೬||
ಅಗ್ರಾಹ್ಯ ಶ್ಶಾಶ್ವತಃ ಕೃಷ್ಣೋ ಲೋಹಿತಾಕ್ಷಃ ಪ್ರತರ್ದನಃ, | [೬೦]

---

ಹೇಳುವ ಶಬ್ದವಿಲ್ಲದ್ದರಿಂದ, ಅಪ್ರತ್ಯಕ್ಷನಾಗಿ, ಗುರುತಿಸಲಾಗದೆ, ಊಹೆಗೆ ಒಳಗಾಗದೆ, ಹೋಲಿಕೆಯಿಲ್ಲದ್ದರಿಂದ, ಅಸದೃಶನೆನಿಸಿ, ಉಪಪಾದಕಸಾಮಗ್ರಿಯಿಲ್ಲದ್ದರಿಂದ ಉಪಪಾದನೆಗೆ ಗುರಿಯಾಗದೆ, ಭಾವರೂಪನಾಗಿರುವುದರಿಂದ ಅಭಾವರೂಪನೆನಿಸಿದ, ಅನಾತ್ಮವಸ್ತುವನ್ನು ತಿರಸ್ಕರಿಸುವ ಮಾತ್ರದಿಂದ ಕೃತಾರ್ಥವಾಗುವ ಶಾಸ್ತ್ರಪ್ರಮಾಣಕ್ಕೆ ವಿಷಯನಾಗದೆ ಸಾಕ್ಷಿರೂಪನೆನಿಸಿದವನು. (ಹೃಷೀಕೇಶಃ) ಇಂದ್ರಿಯಗಳಿಗೊಡೆಯನಾದ, ವಾ, ಇಂದ್ರಿಯಗಳನ್ನು ವಶಪಡಿಸಿಕೊಂಡಿರುವ, ವಾ, ಸೂರ್ಯ ಚಂದ್ರರೂಪನಾಗಿರುವದರಿಂದ, ಹರ್ಷಕರವಾದ ರಶ್ಮಿಗಳುಳ್ಳ, ವಾ, ಹರ್ಷಸುಖಗಳನ್ನನುಭವಿಸುವನು. (ಪದ್ಮನಾಭಃ) ಸರ್ವಜಗತ್ಕಾರಣವಾದ ಪದ್ಮವೇ ನಾಭಿಯಾಗಿ ಉಳ್ಳವನು. (ಅಮರಪ್ರಭುಃ) ಅಮರರಿಗೆಲ್ಲ ಉಚಿತಾಧಿಕಾರವನ್ನು ನೇಮಿಸುವ ಪ್ರಭುವಾದವನು. (ವಿಶ್ವಕರ್ಮಾ) ಸಕಲ ಕರ್ಮಗಳನ್ನೊಳಗೊಂಡಿರುವ, ವಾ, ಜಗನ್ನಿರ್ಮಾಣರೂಪ ಕರ್ಮವುಳ್ಳ, ವಾ, ವಿಚಿತ್ರನಿರ್ಮಾಣಶಕ್ತಿಯುಳ್ಳ ಸೃಷ್ಟಿಕರ್ತನಾಗಿ ವ್ಯವಹಾರದಲ್ಲಿ ತ್ವಷ್ಟೃಬ್ರಹ್ಮನ ಸಾಮ್ಯವನ್ನು ಪಡೆದಿರುವನು. (೫೦)

(ಮನುಃ) ಮನನ ರೂಪನಾದ, ವಾ, ಎಲ್ಲವನ್ನೂ ಬಲ್ಲ, ವಾ, ಮಂತ್ರರೂಪನಾಗಿರುವ, ವಾ, ಮನುವೆಂಬ ಪ್ರಜೇಶ್ವರ ರೂಪನಾದವನು. (ತ್ವಷ್ಟಾ) ಸಂಹಾರ ಸಮಯದಲ್ಲಿ ಎಲ್ಲವನ್ನೂ ಛೇದಿಸುವ, ವಾ, ವಿಚಿತ್ರನಾಮರೂಪಗಳನ್ನು ವಿಭಾಗಿಸುವನು. (ಸ್ಥವಿಷ್ಠಃ) ಎಣೆಯಿಲ್ಲದಷ್ಟು ತೋರವಾಗಿರುವ, ವಾ, ಸಂಕಲ್ಪಾನುಸಾರ ವಿಸ್ತಾರವನ್ನು ಹೊಂದುವನು. (ಸ್ಥವಿರಃ) ಬಲು ಹಳಬನಾದ, ವಾ, ಗಳಿತನಾಗದೆ ಮುದುಕನಾಗಿರುವ, ಕಾಲಚಕ್ರ ಜಗಚ್ಚಕ್ರಗಳನ್ನು ತಿರುಗಿಸುವನು. (ಧ್ರುವಃ) ಸ್ಥಿರವಾಗಿರುವದರಿಂದ ಶಾಶ್ವತನಾದ, ವಾ, ಅಳತೆಯೂ ವಿಕಾರವೂ ಇಲ್ಲದ ಪರಿಣಾಮವುಳ್ಳವನು. (ಅಗ್ರಾಹ್ಯಃ) ಕರ್ಮೇಂದ್ರಿಯಗಳಿಗೆ ಸಿಲುಕದಿರುವ, ವಾ, ಆದಿಮಧ್ಯಾಂತಗಳನ್ನು ಅತಿಕ್ರಮಿಸಿರುವನು. (ಶಾಶ್ವತಃ) ಸರ್ವಕಾಲಗಳಲ್ಲಿಯೂ ನೆಲೆಗೊಂಡಿರುವ, ವಾ, ಸೃಷ್ಟಿ ಸ್ಥಿತಿ ಸಂಹಾರಗಳನ್ನು ನಡೆಸುತ ಏಕರೂಪನಾಗಿರುವನು. (ಕೃಷ್ಣಃ) ನೀಲಮೇಘಶ್ಯಾ

ಪ್ರಭೂತ ಸ್ತ್ರಿಕಕುಬ್ಧಾಮಾ ಪವಿತ್ರಂ ಮಂಗಳಂ ಪರಮ್ ॥೭॥
ಈಶಾನಃ ಪ್ರಾಣದಃ ಪ್ರಾಣೋ ಜ್ಯೇಷ್ಠಶ್ಶ್ರೇಷ್ಠಃ ಪ್ರಜಾಪತಿಃ। [೭೦]

---

ಮನಾದ ಅಥವಾ, ಆನಂದಕ್ಕೆ ನೆಲೆಯಾಗಿರುವನು, (ಲೋಹಿತಾಕ್ಷಃ) ಕೆಂದಾವರೆಯಂತೆ, ಕೆಂಬಣ್ಣದ ಕಣ್ಣುಗಳುಳ್ಳವನು. (ಪ್ರತರ್ದನಃ) ಪ್ರಲಯದಲ್ಲಿ ಸರ್ವಭೂತಗಳನ್ನೂ ನಾಶಗೊಳಿಸುವನು. (೬೦)

(ಪ್ರಭೂತಃ) ಜ್ಞಾನೈಶ್ವರ್ಯಾದಿ ಗುಣಗಳಿಂದ ಸಂಪನ್ನನಾದ, ವಾ, ಸರ್ವಸಮೃದ್ಧಿಯುಳ್ಳವನು. (ತ್ರಿಕಕುಬ್ಧಾಮಾ) ಪ್ರಪಂಚರೂಪಗಳಾಗಿರುವ ಅಣುಮಾತ್ರದ ಲೀಲಾವಿಭೂತಿಗೂ, ಮೇಲೆ ಅಮೃತವುಳ್ಳ ಮೂರು ಭಾಗಕ್ಕೂ, ಊರ್ಧ್ವಾಧೋ ಮಧ್ಯಭೇದದಿಂದಿರುವ ಮೂರು ದಿಕ್ಕುಗಳಿಗೂ ಆಸರೆಯಾಗಿರುವ, ವಾ, ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸು, ಎಂಬ ಮೂರು ಯುಗ್ಮಗುಣಗಳುಳ್ಳ, ವಾ, ವರಾಹಾವತಾರದಲ್ಲಿ ಮೂರು ಹೆಗಲುಳ್ಳವನು. (ಪವಿತ್ರಂ) ಋಷಿದೇವತಾಮಂತ್ರದಿಂದ ಪಾವನಮಾಡುವನು. (ಮಂಗಲಂಪರಂ) ಸ್ಮರಿಸುವವರಿಗೆ ಅಶುಭಗಳನ್ನು ತೊಲಗಿಸಿ ಶುಭವನ್ನು ಕಲ್ಪಿಸುತ, ಪರಮ ಮಂಗಳ ಸ್ವರೂಪನಾಗಿರುವ, ವಾ, ಅನಂತಗುಣ ವಿಭವ ಪ್ರಭಾವಗಳುಳ್ಳವನಾಗಿ ಸರ್ವಭೂತಗಳಿಗೂ ನಿಯಾಮಕನಾದವನು. (ಈಶಾನಃ) ಸರ್ವಭೂತ ನಿಯಾಮಕನಾದವನು. (ಪ್ರಾಣದಃ) ಪ್ರಾಣಗಳನ್ನು ಕೊಡುವ, ವಾ, ಪ್ರಾಣಗಳ ಚಲನೆಗೆ ಕಾರಣನಾದ, ವಾ, ಕಾಲರೂಪದಿಂದ ಪ್ರಾಣಗಳನ್ನು ಖಂಡಿಸುವ, ವಾ, ಪ್ರಾಣಗಳನ್ನು ಶೋಧಿಸುವ, ವಾ, ಉಪಾಸಕರಿಗೆ ಬಲವನ್ನು ಕೊಡುವವನು. (ಪ್ರಾಣಃ) ಪ್ರಾಣಗಳಿಗೂ ಪ್ರಾಣವೆನಿಸಿರುವ, ವಾ, ಮುಖ್ಯ ಪ್ರಾಣಸ್ವರೂಪನಾದ, ವಾ, ಕ್ಷೇತ್ರಜ್ಞ ಇಲ್ಲವೆ, ಪರಮಾತ್ಮಸ್ವರೂಪನಾದವನು (ಜ್ಯೇಷ್ಠಃ) ಎಲ್ಲರಿಗಿಂತಲೂ ದೊಡ್ಡವನಾದ, ವಾ, ಪರಮೈಶ್ವರ್ಯಶಾಲಿಯಾಗಿ ಸರ್ವ ಶ್ಲಾಘ್ಯನಾದವನು. (ಶ್ರೇಷ್ಠಃ) ಅತ್ಯಂತಪ್ರಶಸ್ತನೆನಿಸಿರುವ, ವಾ, ಸರ್ವಕಾರಣನಾಗಿ ಸರ್ವಕ್ಕಿಂತಲೂ ಅತಿಶಯನೆನಿಸಿರುವ, ವಾ, ಸರ್ವಸೇವ್ಯನಾದವನು. (ಪ್ರಜಾಪತಿಃ) ಸಕಲ ಪ್ರಜೆಗಳಿಗೂ ಸ್ವಾಮಿಯೆನಿಸಿರುವ, ವಾ, ಬುದ್ಧರಿಗಿಂತಲೂ ಮುಕ್ತರಿಗಿಂತಲೂ ಮೀರಿದ ನಿತ್ಯಸೂರಿಗಳಿಗೆ ಸ್ವಾಮಿಯಾದವನು. (೭೦)

ಹಿರಣ್ಯಗರ್ಭೋ ಭೂಗರ್ಭೋ ಮಾಧವೋ ಮಧುಸೂದನಃ ||೯||
ಈಶ್ವರೋ ವಿಕ್ರಮೀ ಧನ್ವೀ ಮೇಧಾವೀ ವಿಕ್ರಮಃ ಕ್ರಮಃ, | [೪೦]
ಅನುತ್ತಮೋ ದುರಾಧರ್ಷಃ ಕೃತಜ್ಞಃ ಕೃತಿ ರಾತ್ಮವಾನ್ ||೯||

---

(ಹಿರಣ್ಯಗರ್ಭಃ) ಹಿರಣ್ಯಗರ್ಭನೆನಿಸಿದ ಬ್ರಹ್ಮನ ಸ್ವರೂಪನಾದ, ವಾ, ಶುದ್ಧಸತ್ವಮಯನಾಗಿ ಸುವರ್ಣದಂತೆ ಶೋಭಿಸುವ ಪರಮಪದ ಮಧ್ಯದಲ್ಲಿ ನೆಲೆಗೊಂಡಿರುವನು. (ಭೂಗರ್ಭಃ) ಗರ್ಭಸ್ಥಾನವಾದ ಭೂಮಿಯನ್ನೊಳಗೊಂಡಿರುವನು. (ಮಾಧವಃ) ಶ್ರೀದೇವಿಗೊಡೆಯನಾದ, ವಾ, ಮಧುವಿದ್ಯೆಯಿಂದ ಗೋಚರಿಸುವ, ವಾ, ಮೌನದಿಂದಲೂ, ಧ್ಯಾನದಿಂದಲೂ ಯೋಗದಿಂದಲೂ ತಿಳಿಯಬರುವನು. (ಮಧುಸೂದನಃ)ಮಧುವೆಂಬ ರಕ್ಕಸನನ್ನು ಕೊಂದ, ವಾ, ಉಪಾಸಕರ ಇಂದ್ರಿಯಪ್ರವೃತ್ತಿ ಪ್ರವಾಹಕ್ಕೆ ಸ್ಥಾನವಾದವನು. (ಈಶ್ವರಃ) ಸರ್ವಶಕ್ತಿಸಂಪನ್ನನಾದ, ವಾ, ಸತ್ಯವಾದ ಇಚ್ಛಾಸಂಕಲ್ಪ ಕಾರ್ಯನಿರ್ವಾಹವುಳ್ಳವನು. (ವಿಕ್ರಮೀ) ವ್ಯರ್ಥವಾಗದ ಶೌರ್ಯವುಳ್ಳವನು. (ಧನ್ವೀ) ಶಸ್ತ್ರಧಾರಿಗಳೊಳಗೆ ನಾನು ರಾಮನಾಗಿದ್ದೇನೆ ಎಂದು ಹೇಳಿರುವುದರಿಂದ ಪ್ರಶಸ್ತವಾದ ಧನುಸ್ಸುಳ್ಳವನು. (ಮೇಧಾವೀ) ಬಹು ಗ್ರಂಥಧಾರಣ ಸಾಮರ್ಥ್ಯವುಳ್ಳ, ವಾ, ಸರ್ವಜ್ಞತಾ ರೂಪಗುಣವುಳ್ಳವನು. (ವಿಕ್ರಮಃ) ಜಗತ್ತನ್ನು ಅಳೆದ, ವಾ, ಗರುಡನಿಲ್ಲದೆಯೇ ಪ್ರಯಾಣ ಮಾಡುವ, ವಾ, ಛಂದೋಮಯನಾದ (ವಿ)-ಗರುಡನ ಮೂಲಕ (ಕ್ರಮ) ಪ್ರಯಾಣಮಾಡುವನು. (ಕ್ರಮಃ) ಪ್ರಪಂಚಕ್ರಮಕ್ಕೆ ಕಾರಣನಾದ, ವಾ, ಮೂರುಪಾದಗಳಿಂದ ಭೂಮಿ, ಆಕಾಶ, ಬಲಿಯ ಜನ್ಮಗಳನ್ನು ಆಕ್ರಮಿಸಿದವನು. (೪೦)

(ಅನುತ್ತಮಃ) ಸರಿ, ಸಮ, ಮೇಲು ಎನಿಸಿದವರಿಲ್ಲದ್ದರಿಂದಲೇ ಸರ್ವೋತ್ತಮನಾದವನು. (ದುರಾಧರ್ಷಃ) ಯಾರಿಂದಲೂ ಇದಿರಿಸಲಿಕ್ಕೆ ಸಾಧ್ಯನಲ್ಲದವನು. (ಕೃತಜ್ಞಃ) ಪ್ರಾಣಿಗಳು ಆಚರಿಸುವ ಪುಣ್ಯಾಪುಣ್ಯರೂಪವಾದ ಕರ್ಮವನ್ನೆಲ್ಲ ಅರಿಯುವ, ವಾ, ಭಕ್ತಿಯಿಂದ ಕೊಡುವ ಪತ್ರಪುಷ್ಪಾದಿಗಳನ್ನು ಬಹುಮಾನಿಸಿ ಅವರಿಗೆ ಮುಕ್ತಿಯನ್ನೀವನು. (ಕೃತಿಃ) ಪುರುಷಪ್ರಯತ್ನಕ್ಕೆ ಆಧಾರವಾಗಿರುವ, ವಾ, ಹೆಚ್ಚಿದ ಪ್ರಯತ್ನದಿಂದ ಕಾಣಬರುವ, ವಾ, ಜಗಸ್ರೂಸವಾದ ಮಹಿಮೆಯಿಂದ ತಿಳಿಯಬರುವ,

ಸುರೇಶ ಶ್ಶರಣಂ ಶರ್ಮ ವಿಶ್ವರೇತಾಃ, ಪ್ರಜಾಭವಃ। [೯೦]
ಅಹ ಸ್ಸಂವತ್ಸರೋ ವ್ಯಾಲಃ ಪ್ರತ್ಯಯ ಸ್ಸರ್ವ ದರ್ಶನಃ ||೧೦||
ಅಜಸ್ಸರ್ವೇಶ್ವರ ಸ್ಸಿದ್ಧ, ಸ್ಸಿದ್ಧಿ ಸ್ಸರ್ವಾದಿ ರಚ್ಯುತಃ । [೧೮೦]

---

ವಾ, ಕರ್ಮಪ್ರವರ್ತಕನಾದವನು, (ಆತ್ಮವಾನ್) ಸ್ವಮಹಿಮೆಯಲ್ಲಿಯೇ ನೆಲೆಗೊಂಡಿರುವ, ವಾ, ಮುಕ್ತಾತ್ಮರನ್ನೊಳಗೊಂಡಿರುವವನು. (ಸುರೇಶಃ) ಸುರರಿಗೊಡೆಯನಾದ, ವಾ, ಶುಭಪ್ರದರಿಗೆಲ್ಲಾ ಸ್ವಾಮಿಯಾದವನು. (ಶರಣಂ) ಆರ್ತರ ಮನೋವ್ಯಥೆಯನ್ನು ಪರಿಹರಿಸುವ, ವಾ, ದೀನರು ಪಡೆಯಬೇಕಾದ ಫಲಕ್ಕೆ ಸಾಧಕವಾಗಿರುವ [ಉಪಾಯ] ನು. (ಶರ್ಮ) ಪರಮಾನಂದರೂಪನಾದವನು. (ವಿಶ್ವರೇತಾಃ) ಕರ್ಮ, ಜ್ಞಾನೇಂದ್ರಿಯಗಳಿಗೆ ಶಕ್ತಿಯನ್ನು ಕೊಡುವ ಮೂಲಕಾರಣನೆನಿಸಿದವನು. (೯೦)

(ಪ್ರಜಾಭವಃ) ಸರ್ವಪ್ರಜೆಗಳ ಉತ್ಪತ್ತಿಗೆ ಆದಿಕಾರಣನೆನಿಸಿದವನು. (ಅಹಃ) ಪ್ರಕಾಶಸ್ವರೂಪನಾದ, ವಾ, ಸರ್ವವ್ಯಾಪಕನಾದ, ವಾ, ಸ್ವಲ್ಪ ಸೇವೆಮಾಡಿದವನಿಗೂ ಸದ್ಗತಿಯನ್ನು ಕೊಡುವವನು. (ಸಂವತ್ಸರಃ) ಕಾಲರೂಪದಿಂದ ನೆಲೆಗೊಂಡಿರುವ, ವಾ, ಬ್ರಹ್ಮಾದಿದೇವತೆಗಳನ್ನು ಕರುಗಳಂತೆ ಕಾಯುವ, ವಾ, ತನ್ನ ಸೇವಕರಿಗೆ ಬುದ್ಧಿಯೋಗವನ್ನು ಕಲ್ಪಿಸುವವನು. (ವ್ಯಾಲಃ) ಮಹಾಗಜದಂತೆ, ವಾ, ಪ್ರಬಲಸರ್ಪದಂತೆ ಹಿಡಿಯಲಿಕ್ಕೆ ಸಾಧ್ಯನಲ್ಲದ, ವಾ, ಭಕ್ತರನ್ನು ಸ್ವಾಧೀನಲ್ಲಿಟ್ಟುಕೊಳ್ಳುವವನು. (ಪ್ರತ್ಯಯಃ) ಪ್ರಜ್ಞಾಸ್ವರೂಪನಾದ, ವಾ, ಶ್ರೇಯಃಪ್ರಾಪ್ತಿಗಾಗಿ ನಂಬಲ್ಪಡತಕ್ಕವನು. (ಸರ್ವದರ್ಶನಃ) ಸರ್ವದರ್ಶನಶಕ್ತನಾದ, ವಾ, ಸರ್ವಾತ್ಮಕನಾದ, ವಾ, ತನ್ನಮಹಿಮೆಯನ್ನು ತೋರುವವನು. (ಅಜಃ) ಕಾಲತ್ರಯದಲ್ಲಿಯೂ ಜನ್ಮವಿಲ್ಲದ, ವಾ, ಭಕ್ತರ ಶ್ರೇಯಃಪ್ರಾಪ್ತಿಯವಿಘ್ನಗಳನ್ನು ಪರಿಹರಿಸುವವನು. (ಸರ್ವೇಶ್ವರಃ) ಈಶ್ವರರಿಗೆಲ್ಲಾ ಈಶ್ವರನಾದ, ವಾ, ಶರಣಾಗತರಾದ ಸರ್ವರಿಗೂ ಅಭಯದಾನ ಮಾಡುವ ಸ್ವಾಮಿಯಾದವನು. (ಸಿದ್ಧಃ) ಸದಾ ಅಂದವಾದ ಮತ್ತು ಅಣಿಯಾದ ರೂಪವುಳ್ಳ, ವಾ, ಎಲ್ಲಾವಸ್ತುಗಳಲ್ಲಿಯೂ ಸತ್ವರೂಪದಿಂದಿರುವ, ವಾ, ಅಸದೃಶರೂಪವುಳ್ಳ, ವಾ, ಮರೆಹೊಕ್ಕವರಿಗೆಗತಿಯಾಗಿರುವವನು (೧೦೦)

(ಸಿದ್ಧಿಃ) ನಿರತಿಶಯ ಫಲರೂಪನಾದವನು. (ಸರ್ವಾದಿಃ) ಸರ್ವ ಭೂತಗಳಿಗೂ ಆದಿ ಕಾರಣನೆನಿಸಿದ, ವಾ, ಸರ್ವ ಭಕ್ತರಿಗೂ ಇಹ

ವೃಷಾಕಪಿ ರಮೇಯಾತ್ಮಾ ಸರ್ವಯೋಗ ವಿನಿಸ್ಸೃತಃ ||೧೧||
ವಸು ರ್ವಸುಮನಾ ಸ್ಸತ್ಯ ಸ್ಸಮಾತ್ಮಾ ಸಮ್ಮಿತ ಸ್ಸಮಃ | [೧೦]
ಅಮೋಘಃ ಪುಣ್ಡರೀಕಾಕ್ಷೋ ವೃಷಕರ್ಮಾ ವೃಷಾಕೃತಿಃ ||೧೨||

---

ಪರಸುಖಪ್ರದನಾದವನು. (ಅಚ್ಯುತಃ) ಎಂದಿಗೂ ಚ್ಯುತಿಯಿಲ್ಲದ ಎಂದರೆ ಶಾಶ್ವತನಾದ, ವಾ, ಶರಣಾಗತರಕ್ಷಣವೆಂಬ ದೃಢವ್ರತವುಳ್ಳವನು. (ವೃಷಾಕಪಿಃ) ಭಕ್ತರಕಾಮಗಳನ್ನು ವರ್ಷಿಸುವ ಮತ್ತು ಜಲದಿಂದ ಭೂಮಿಯನ್ನು ವರಾಹರೂಪದಿಂದ ಪಾಲಿಸಿ, ಧರ್ಮಸ್ವರೂಪನೆನಿಸಿದವನು. (ಅಮೇಯಾತ್ಮಾ) ಇಷ್ಟೆಂದು ಅಳೆಯುಲಿಕ್ಕೆ ಅಳವಲ್ಲದ ಶರೀರವುಳ್ಳವನು. (ಸರ್ವಯೋಗವಿನಿಸ್ಸೃತಃ) ಸರ್ವಸಂಬಂಧಗಳಿಂದ ಬಿಡಲ್ಪಟ್ಟಿರುವ, ಸಕಲಯೋಗಗಳಿಗೂ ಅಗೋಚರನಾದ, ಅಥವಾ ಸರ್ವೋಪಾಯಗಳಿಂದಲೂ ಹೊಂದಲ್ಪಡತಕ್ಕವನು. ( ವಸುಃ ) ಎಲ್ಲವನ್ನೂ ಆವರಿಸಿರುವ, ವಾ, ವಸುಗಳೊಳಗೆ ಪಾವಕನೆಂಬ ವಸು ಎನಿಸಿರುವವನು (ವಸುಮನಾಃ) ರಾಗ ದ್ವೇಷಾದಿಕ್ಲೇಶಗಳಿಂದಲೂ, ಮದಮಾತ್ಸರ್ಯಾದಿ ಉಪಕ್ಲೇಶಗಳಿಂದಲೂ ಮಲಿನವಾಗದೆ ಪ್ರಶಸ್ತವಾದ ಮನಸ್ಸುಳ್ಳವನು. (ಸತ್ಯಃ) ಲೋಪವಿಲ್ಲದ ರೂಪವುಳ್ಳ, ವಾ, ಮೂರ್ತಾಮೂರ್ತಸ್ವರೂಪವುಳ್ಳ, ವಾ, ಪ್ರಾಣ ಅನ್ನ, ಆದಿತ್ಯರೂಪನಾದ, ಸಾಧುಗಳಲ್ಲಿ ನೆಲೆಗೊಂಡಿರುವನು. (ಸಮಾತ್ಮಾ) ಸರ್ವತ್ರ ಸಮನೆನಿಸಿದ, ವಾ, ಸರ್ವಭೂತಗಳಲ್ಲಿಯೂ, ಏಕಾತ್ಮನಾಗಿರುವ, ವಾ, ರಾಗದ್ವೇಷಾದಿಗಳಿಂದ ದೂಷಿತವಾಗದ ಮನಸ್ಸುಳ್ಳವನು. (ಅಸಮ್ಮಿತಃ) ಯಾವ ಬಗೆಯಾದ ಅಳತೆಗೂ ಒಳಗಾಗದಿರುವವನು. (ಸಮಃ) ಯಾವ ಕಾಲದಲ್ಲಿಯೂ ಯಾವ ಬಗೆಯಾದ ವಿಕಾರವನ್ನೂ ಪಡೆಯದಿರುವ, ವಾ, ಲಕ್ಷ್ಮೀದೇವಿಯೊಡಗೂಡಿರುವನು. (೧೦)

( ಅಮೋಘಃ ) ಪೂಜಿಸುವ, ಸ್ತುತಿಸುವ, ಸ್ಮರಿಸುವ, ಭಕ್ತರ ಕಾಮಗಳನ್ನು ವ್ಯರ್ಥವಾಡದೆ ಸಫಲಗೊಳಿಸುವ, ಸತ್ಯಸಂಕಲ್ಪನಾದವನು. (ಪುಂಡರೀಕಾಕ್ಷಃ) ಹೃದಯ ಪುಂಡರೀಕದಲ್ಲಿ ನೆಲೆಗೊಂಡಿರುವ, ವಾ, ಪುಂಡರೀಕಾಕಾರವಾದ ಕಣ್ಣುಳ್ಳವನು. (ವೃಷಕರ್ಮಾ) ಧರ್ಮಲಕ್ಷಣವಾದ ಕರ್ಮವುಳ್ಳವನು. (ವೃಷಾಕೃತಿಃ) ಧರ್ಮಾರ್ಥವಾದ ಅವತಾರವುಳ್ಳ, ವಾ, ಭಕ್ತರಿಗೆ ಇಷ್ಟಾರ್ಥವನ್ನು ಕೊಡುವ ವ್ಯಾಪಾರವುಳ್ಳ, ವಾ, ಧರ್ಮಸ್ಥಾಪನೆಗಾಗಿ ಶರೀರವನ್ನು ಸ್ವೀಕರಿಸುವ, ವಾ, ಅಮೃತಪ್ರ

ರುದ್ರೋ ಬಹುಶಿರಾ ಬಭ್ರು ರ್ವಿಶ್ವಯೋನಿ ಶ್ಶುಚಿಶ್ರವಾಃ।
ಅಮೃತ, ಶ್ಶಾಶ್ವತ ಸ್ಥಾಣು ರ್ವರಾರೋಹೋ ಮಹಾತಪಾಃ [೨೦]॥೧೩॥
ಸರ್ವಗ ಸ್ಸರ್ವವಿ ದ್ಭಾನು ರ್ವಿಷ್ವಕ್ಸೇನೋ ಜನಾರ್ದನಃ, ।
ವೇದೋ ವೇದವಿ, ದವ್ಯಂಗೊ ವೇದಾಂಗೊ ವೇದವಿ ತ್ಕವಿಃ [೩೦] ॥೧೪॥

---

ವಾಹದಂತೆ ಪರಮಶಾಂತಸ್ವರೂಪನಾದವನು. (ರುದ್ರಃ) ಸಂಹಾರಕಾಲದಲ್ಲಿ ಪ್ರಜೆಗಳನ್ನು ಸಂಹರಿಸಿ ದುಃಖಗೊಳಿಸುವ, ವಾ, ದುಷ್ಟರಿಗೆ ದುಃಖವನ್ನು ಕೊಡುವ, ವಾ, ಭಕ್ತರದುಃಖಕಾರಣವನ್ನು ಓಡಿಸುವವನು. (ಬಹುಶಿರಾಃ) ಸಾವಿರಾರು ಶಿರಸ್ಸುಗಳನ್ನೊಳಗೊಂಡಿರುವನು. (ಬಭ್ರುಃ) ಲೋಕಗಳನ್ನೆಲ್ಲಭರಿಸುವವನು. (ವಿಶ್ವಯೋನಿಃ) ಸರ್ವಕ್ಕೂ ಸರ್ವಕಾರಣನೆನಿಸಿದವನು, ವಾ, ಸೇವಿಸುವವರನ್ನೆಲ್ಲ ತನ್ನಲ್ಲಿ ಸೇರಿಸಿಕೊಂಬುವನು. (ಶುಚಿಶ್ರವಾಃ) ಶುದ್ಧವಾದ ಮತ್ತು ಶ್ರಾವ್ಯವಾದ ನಾಮಗಳುಳ್ಳ, ವಾ, ದಿವ್ಯಶ್ರೋತ್ರಗಳುಳ್ಳ, ವಾ, ಸರ್ವಸಂಕೀರ್ತ್ಯನಾದವನು. (ಅಮೃತಃ) ಜರಾಮರಣ ಧರ್ಮಗಳಿಲ್ಲದೆ ಅಮೃತರಸದಂತೆ ಹಿತಕರನಾಗಿರುವನು. (೨೦)

(ಶಾಶ್ವತಸ್ಥಾಣುಃ) ಅಪಾರವಾದ ನೆಲೆಯುನ್ನೊಳಗೊಂಡಿರುವ, ವಾ, ಪುನರಾವೃತ್ತಿಯಿಲ್ಲದ ಅಮೃತಸ್ಥಾನವಾಗಿರುವವನು. (ವರಾರೋಹಃ) ಭಕ್ತರುಪಡೆಯುವ ಉನ್ನತಸ್ಥಾನವಾಗಿರುವ, ವಾ, ಪುನರಾವೃತ್ತಿರಹಿತವಾದ ಉನ್ನತಸ್ಥಾನವಾಗಿರುವ, ವಾ, ಪರ, ವ್ಯೂಹ, ವಿಭವಾದಿ ರೂಪವಾಗಿರುವವನು. (ಮಹಾತಪಾಃ) ಸೃಷ್ಟಿಸಮಯದಲ್ಲಿ ಜ್ಞಾನಮಯವಾದತಪಸ್ಸುಳ್ಳ, ವಾ, ಮಹತ್ತಾದ ಐಶ್ವರ್ಯ ಅಥವಾ ಪ್ರತಾಪವುಳ್ಳವನು. (ಸರ್ವಗಃ) ಕಾರಣ ರೂಪದಿಂದ ಎಲ್ಲ ಕಡೆಗಳಲ್ಲಿಯೂ ವ್ಯಾಪಿಸಿರುವ, ವಾ, ಸರ್ವವನ್ನೂ ಸಂಹರಿಸಿ ಆತ್ಮದಲ್ಲಿ ಅಡಗಿಸಿಕೊಂಬುವನು. (ಸರ್ವವಿತ್) ಸರ್ವತ್ರ ಸರ್ವವನ್ನೂ ತಿಳಿಯುತ್ತ ಅಥವಾ ಸರ್ವವನ್ನೂ ಒಳಗೊಳ್ಳುವನು. (ಭಾನುಃ) ಸರ್ವತ್ರ ಭಾಸಮಾನನಾದ, ಅಥವಾ ಎಲ್ಲರ ಪ್ರಕಾಶಕ್ಕೂಕಾರಣನಾದವನು. (ವಿಷ್ವಕ್ಸೇನಃ) ಸಾನ್ನಿಧ್ಯಮಾತ್ರದಿಂದ ದೈತ್ಯಸೇನೆಯನ್ನು ಓಡಿಸುವವನು, ವಾ, ಸರ್ವವಿಧ ಸಹಾಯವುಳ್ಳವನು. (ಜನಾರ್ದನಃ) ದುರ್ಜನರನ್ನು ನರಕಾದಿಗಳಲ್ಲಿ ಹಿಂಸೆಪಡಿಸುವ ಅಥವಾ ಪುರುಷಾರ್ಥಗಳಿಗಾಗಿ ಜನರಿಂದ ಪ್ರಾರ್ಥಿಸಲ್ಪಡುವವನು. (ವೇದಃ) ವೇದರೂಪನಾಗಿರುವ, ವಾ, ಅಂತರಂಗದಲ್ಲಿದ್ದು ದಯೆತೋರಿ ಜ್ಞಾನರೂಪ ದೀಪ

ಲೋಕಾಧ್ಯಕ್ಷಃ ಸುರಾಧ್ಯಕ್ಷೋ ಧರ್ಮಾಧ್ಯಕ್ಷಃ ಕೃತಾಕೃತಃ ।
ಚತುರಾತ್ಮಾ ಚತುರ್ವ್ಯೂಹ, ಶ್ಚತುರ್ದಂಷ್ಟ್ರ ಶ್ಚತು ರ್ಭುಜಃ [೨೦]೧೫॥

---

ದಿಂದ ಅಜ್ಞಾನವೆಂಬ ಕತ್ತಲನ್ನು ಒಡಿಸಿ ಎಲ್ಲವನ್ನೂ ತಿಳಿಸುವ, ವಾ, ಚತುರ್ಮುಖಬ್ರಹ್ಮನಿಗೆ ಸೃಷ್ಟಿಕ್ರಮವನ್ನು ತಿಳಿಸುವ ವೇದವನ್ನುಪದೇಶಿಸುವವನು. (ವೇದವಿತ್) ವೇದಶಾಸ್ತ್ರತತ್ವಗಳನೆಲ್ಲ ಭ್ರಮಪ್ರಮಾದಾದಿದೋಷಗಳಿಲ್ಲದಂತೆ ಬಲ್ಲ, ಅಥವಾ ವೇದಶಾಸ್ತ್ರಗಳಮೂಲಕ ತಿಳಿಯಬರುವವನು. (೨೦)

(ಅವ್ಯಂಗಃ) ಯಾವಲೋಪವೂ ಇಲ್ಲವೆ ಜ್ಞಾನಾದಿಗಳಿಂದ ಪರಿಪೂರ್ಣನಾಗಿರುವ, ವಾ, ಅಜ್ಞಾನಿಗಳಿಗೆ ವ್ಯಕ್ತನಾಗದಿರುವ, ವಾ, ವೇದವೇದಾಂಗಗಳಲ್ಲಿ ವ್ಯಾಪಿಸಿರುವವನು (ವೇದಾಂಗಃ) ವೇದವಿಚಾರಪರನಾದ, ವಾ, ಅನಂತಶಾಖೆಗಳಾಗಿರುವ ವೇದಗಳೇ ಅಂಗಗಳಾಗಿರುವ, ವಾ, ವೇದರೂಪವಾದ ಆಜ್ಞೆಯುಳ್ಳವನು. ("ವೇದವಿತ್") ಸಾಧನರೂಪವಾದ ವೇದಗಳಿಂದ ತಿಳಿಯಬರುವವನು, ವಾ, ವಿಚಾರಪರರಿಗೆ ವೇದವನ್ನು ಹೊಳೆಯುವಂತೆ ಮಾಡುವವನು. (ಕವಿಃ) ಕಳೆದುಹೋದದ್ದನ್ನೆಲ್ಲ ಕಾಣುವವನು, ವಾ, ಧರ್ಮ ಮತ್ತು ಧರ್ಮದೇವತೆಗಳನ್ನು ಬಲ್ಲವನು. (ಲೋಕಾಧ್ಯಕ್ಷಃ) ಲೋಕಗಳನ್ನೆಲ್ಲ ಅಡಿಯಾಳಾಗಿಮಾಡಿಕೊಂಡಿರುವ, ಅಥವಾ ಪ್ರಮುಖನಾಗಿ ಎಲ್ಲ ಲೋಕಗಳನ್ನೂ ನೋಡುತ್ತಿರುವವನು. (ಸುರಾಧ್ಯಕ್ಷಃ) ಲೋಕಪಾಲಕರಾದ ದೇವತೆಗಳಿಗೆಲ್ಲ ಒಡೆಯನಾದ, ಅಥವಾ ತಂತಮ್ಮಪದವಿಯನ್ನು ಕಾಪಾಡಬೇಕೆಂದು ಬೇಡುವ ದೇವತೆಗಳಿಗೆ ಪ್ರತ್ಯಕ್ಷನಾಗುವವನು. (ಧರ್ಮಾಧ್ಯಕ್ಷಃ) ಧರ್ಮಾಧರ್ಮಗಳ ತಾರತಮ್ಯವನ್ನರಿತು ಉಚಿತಫಲವನ್ನು ಕೊಡುವ ಯಜಮಾನನಾಗಿರುವವನು. (ಕೃತಾಕೃತಃ) ಪ್ರವೃತ್ತಿಧರ್ಮಸ್ವರೂಪನೂ, ನಿವೃತ್ತಿಧರ್ಮಸ್ವರೂಪನೂ ಆಗಿರುವ, ವಾ, ಕಾರ್ಯಕಾರಣ ರೂಪದಿಂದ ಕೃತಾಕೃತನೆನಿಸಿರುವ ಎಂದರೆ ಸೃಷ್ಟ್ಯಾದಿಗಳನ್ನು ಮಾಡುವವನಾಗಿದ್ದರೂ ಮತ್ತೊಬ್ಬನಿಂದ ಸೃಷ್ಟಿಸಲ್ಪಡುವವನಂತಿರುವವನು. (ಚತುರಾತ್ಮಾ) ಸೃಷ್ಟಿಯಲ್ಲಿ-ಬ್ರಹ್ಮನು, ದಕ್ಷಮೊದಲಾದವರು, ಕಾಲವು, ಇತರಪ್ರಾಣಿಗಳು, (ಸ್ಥಿತಿಯಲ್ಲಿ) ವಿಷ್ಣು, ಮನ್ವಾದಿಗಳು, ಕಾಲವು, ಸಕಲಭೂತಗಳು, (ಪ್ರಳಯದಲ್ಲಿ) ರುದ್ರನು ಕಾಲವು, ಅಂತಕನು, ಸಮಸ್ತಜಂತುಗಳು, ಪರಮಾರ್ಥದಲ್ಲಿ ಕೇವಲಾತ್ಮನಾದ

ಭ್ರಾಜಿಷ್ಣು ರ್ಭೋಜನಂ ಭೋಕ್ತಾ ಸಹಿಷ್ಣು ರ್ಜಗದಾದಿಜಃ |
ಅನಘೋ ವಿಜಯೋ ಜೇತಾ, ವಿಶ್ವಯೋನಿಃ ಪುನರ್ವಸುಃ [೫೦] ||೧೬||
ಉಪೇಂದ್ರೋ ವಾಮನಃ ಪ್ರಾಂಶು ರಮೋಘ ಶ್ಶುಚಿ ರೂರ್ಜಿತಃ ||

---

ತಾನು, ಎಂದೀಪ್ರಕಾರ ನಾಲ್ಕುಬಗೆಯಾದ ಸ್ವರೂಪವುಳ್ಳವನು. (ಚತು ರ್ವ್ಯೂಹಃ) ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕುಬಗೆಯ ವ್ಯೂಹಾತ್ಮನಾಗಿರುವ,ವಾ, ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯ ಎಂಬ ನಾಲ್ಕು ಬಗೆಯಾಗಿ ತೋರುವ, ವಾ, ಮಂಗಳ ವಿಗ್ರಹ, ಕಲ್ಯಾಣಗುಣ, ದಿವ್ಯಾಯುಧ, ರತ್ನಾಭರಣ ಎಂಬೀ ನಾಲ್ಕು ಅವಯವ ಗಳಿಂದ ಶೋಭಿಸುವವನು. (೪೦)

(ಚತುರ್ದಂಷ್ಟ್ರಃ) ನಾಲ್ಕು ಕೋರೆ ಹಲ್ಲುಗಳುಳ್ಳ ನೃಸಿಂಹರೂಪಿ ಯಾದ, ಅಥವಾ ನಾಲ್ಕು ಶಿಖರಗಳಂತಿರುವ ನಾಲ್ಕುವೇದಗಳುಳ್ಳವನು. (ಚತುರ್ಭುಜಃ) ನಾಲ್ಕು ಬಾಹುಗಳುಳ್ಳವನು. (ಭ್ರಾಜಿಷ್ಣುಃ) ಪ್ರಕಾಶ ಮಯನಾಗಿ ಹೊಳೆಯುತ್ತಿರುವ, ವಾ, ಉಪಾಸಕರಿಗೆ ದಿವ್ಯರೂಪದಿಂ ದ ಪ್ರತ್ಯಕ್ಷನಾಗುವವನು. ( ಭೋಜನಂ ) ಭೋಗ್ಯರೂಪದಿಂದಿರುವ ಪ್ರಕೃತಿಯಾಗಿ ಭೋಜನವೆನಿಸುವವನು, ವಾ, ಭಕ್ತರಿಂದ ಅನುಭವಿಸ ಲ್ಪಡುವವನು. ( ಭೋಕ್ತಾ ) ಪುರುಷರೂಪದಿಂದ ಪ್ರಕೃತಿಯನ್ನು ಭುಜಿಸುವವನಾಗಿರುವ, ವಾ, ಭಕ್ತರು ಭಕ್ತಿಯಿಂದೊಪ್ಪಿಸಿದ್ದನ್ನು ಅಮೃ ತದಂತೆಸ್ವೀಕರಿಸುವವನು. (ಸಹಿಷ್ಣುಃ) ಹಿರಣ್ಯಾಕ್ಷನೇ ಮೊದಲಾದವ ರ ಚೇಷ್ಟೆಯನ್ನು ಸಹಿಸಿ ಅವರನ್ನಡಗಿಸಿದವನು. (ಜಗದಾದಿಜಃ) ಜನ್ಮ ವಿಲ್ಲದಿದ್ದರೂ ಮಾಯೆಯಿಂದ ಜಗದಾದಿಯಲ್ಲಿ ಹಿರಣ್ಯಗರ್ಭರೂಪದಿಂದ ಆವಿರ್ಭವಿಸುವವನು. (ಅನಘಃ) ಹಾಗೆ ಅವತರಿಸಿದರೂ, ಪಾಪಲೇಪ ವಿಲ್ಲದವನು. (ವಿಜಯಃ) ವಿಶೇಷಜ್ಞಾನ, ವೈರಾಗ್ಯ, ಐಶ್ವರ್ಯ ಮೊದ ಲಾದ ಗುಣಗಳಿಂದ ಜಗದ್ವಿಜಯಿಯಾಗಿರುವವನು, ವಾ, ಭಕ್ತರಿಗೆ ಜಯ ವನ್ನುಂಟುಮಾಡುವವನು. (ಜೇತಾ) ಸರ್ವಭೂತಗಳನ್ನೂ ಸ್ವಭಾವ ಸ್ಥಿತಿ ಸ್ವರೂಪದಿಂದ ಜಯಿಸುವವನು. (೫೦)

(ವಿಶ್ವಯೋನಿಃ) ಬ್ರಹ್ಮ, ವಿಷ್ಣು, ಶಿವಸ್ವರೂಪದಿಂದ ಸರ್ವಕ್ಕೂ ಸರ್ವಕಾರಣನೆನಿಸಿರುವವನು. (ಪುನರ್ವಸುಃ) ಪುನಃಪುನಃ ಶರೀರಗಳಲ್ಲಿ ಕ್ಷೇತ್ರಜ್ಞರೂಪದಿಂದ ವಾಸಿಸುವವನು. (ಉಪೇಂದ್ರಃ) ಅನುಜಭಾವ

ಅತೀಂದ್ರಸ್ಸಂಗ್ರಹಸ್ಸರ್ಗೋ ಧೃತಾತ್ಮಾ ನಿಯಮೋ ಯಮಃ [೬೯]||೧೭||
ವೇದ್ಯೋ ವೈದ್ಯಸ್ಸದಾಯೋಗೀ ವೀರಹಾ ಮಾಧವೋ ಮಧುಃ, || [೭೦]
ಅತೀಂದ್ರಿಯೋ ಮಹಾಮಾಯೋ ಮಹೋತ್ಸಾಹೋ ಮಹಾಬಲಃ|| ||೧೮||

---

ದಿಂದ ಇಂದ್ರನನ್ನು ಸೇವಿಸಿದ, ಅಥವಾ ಇಂದ್ರನಿಗೂ ಇಂದ್ರನೆಂದು ದೇವತೆಗಳಿಂದ ಹೊಗಳಿಸಿಕೊಳ್ಳುವವನು. (ವಾಮನಃ) ವಾಮನರೂಪ ದಿಂದ ಬಲಿಯನ್ನು ಯಾಚಿಸಿದ, ಅಥವಾ, ವಾಮನರೂಪನೆಂದು ವಿಶ್ವೇ ದೇವತೆಗಳಿಂದ ಸೇವಿಸಲ್ಪಡುವ, ವಾ, ವಾಮಭಾಗದಲ್ಲಿ ಲಕ್ಷ್ಮೀದೇವಿ ಯಿಂದ ಅಲಂಕೃತನಾದವನು. (ಪ್ರಾಂಶುಃ) ವಾಮನನಾಗಿದ್ದು, ದಾನ ಜಲಧಾರೆಯು ಕಯ್ಯಲ್ಲಿ ಬಿದ್ದೊಡನೆಯೇ ಅವಾಮನನಾಗಿ ಸರ್ವದೇವ ಸ್ವರೂಪವನ್ನು ತೋರಿದ ಎಂದರೆ- ಭೂಮಿಯು ಪಾದವಾಗಿಯೂ, ದ್ಯು ಲೋಕವು ಶಿರಸ್ಸಾಗಿಯೂ, ಸೂರ್ಯಚಂದ್ರರು ನೇತ್ರಸ್ಥಾನವಾಗಿಯೂ, ಇ ರುವಂತೆ ವಿಶ್ವರೂಪವನ್ನು ತಾಳಿ, ಭೂಮಿಯನ್ನು ಅಳೆವಾಗ ಸೂರ್ಯಚಂದ್ರ ರು ಸ್ತನಗಳ ಸ್ಥಾನದಲ್ಲಿ ನಿಲ್ಲುವಂತೆ ಕಾಣಿಸಿಕೊಂಡು, ಆಕಾಶವನ್ನು ಆಕ್ರ ಮಿಸುವಾಗ ಆದಿತ್ಯಚಂದ್ರರು ನಾಭಿಸ್ಥಾನದಲ್ಲಿ ನೆಲೆಗೊಳ್ಳುವಂತೆ ಕಾಣಿ ಸಿಕೊಂಡು, ದ್ಯುಲೋಕವನ್ನು ಅಳತೆ ಮಾಡುವಾಗ ಆ ಚಂದ್ರಾದಿತ್ಯರನ್ನು ಮೊಳಕಾಲುಗಳೆಡೆಯಲ್ಲಿ ನಿಲ್ಲುವಂತೆ ತೋರಿ, ಅತ್ಯುನ್ನತನೆನಿಸಿಕೊಳ್ಳುವವ ನು. (ಅಮೋಘಃ) ವ್ಯರ್ಥವಾಗದಿರುವ ವ್ಯಾಪಾರವುಳ್ಳ ಎಂದರೆ ಸತ್ಯಸಂ ಕಲ್ಪನಾದವನು. (ಶುಚಿಃ) ಸ್ಮರಿಸುವ, ಸ್ತುತಿಸುವ ಮತ್ತು ಪೂಜಿಸುವ ವರನ್ನು ಪಾವನಮಾಡುವ, ಅಥವಾ ಪವಿತ್ರಸ್ಪರ್ಶವುಳ್ಳ, ಅಥವಾ ಅಸ್ಪರ್ಶ ನಾಗಿ ಮಹತ್ತರನೆನಿಸಿ ಶುಚಿಯಾಗಿರುವ, ವಾ, ಪ್ರತ್ಯುಪಕಾರವನ್ನು ಬಯಸದವನು. (ಊರ್ಜಿತಃ) ಬಲಾತಿಶಯವುಳ್ಳವನು. (ಅತೀಂದ್ರಃ) ಸ್ವಭಾವಸಿದ್ಧವಾದ ಜ್ಞಾನೈಶ್ವರ್ಯಾದಿಗಳಿಂದ ಇಂದ್ರನನ್ನು ಅತಿಕ್ರಮಿಸಿ ದವನು. (ಸಂಗ್ರಹಃ) ಸಂಹಾರಕಾಲದಲ್ಲಿ ಸರ್ವವನ್ನೂ ಸ್ವಾತ್ಮದಲ್ಲಿ ಉಪ ಸಂಹರಿಸಿಕೊಳ್ಳುವ, ವಾ, ಭಕ್ತರಸೇವೆಯನ್ನು ಪ್ರೀತಿಯಿಂದ ಸಂಗ್ರಹಿ ಸುವವನು, (೬೦)

(ಸರ್ಗಃ) ಸೃಷ್ಟಿಸುವ ವಸ್ತುರೂಪದಿಂದಿರುವ, ಅಥವಾ ಸೃಷ್ಟಿಕಾರಣ ನಾದಅಥವಾ ಭಕ್ತಾನುಗ್ರಹಾರ್ಥವಾಗಿ ಅವತರಿಸುವವನು. (ಧೃತಾತ್ಮಾ) ಜನ್ಮಾದಿ ರಾಹಿತ್ಯದಿಂದ ಏಕಾತ್ಮರೂಪನಾದವನು. (ನಿಯಮಃ) ತಂತ

ಮಹಾಬುದ್ಧಿರ್ಮಹಾವೀರ್ಯೋ ಮಹಾಶಕ್ತಿರ್ಮಹಾದ್ಯುತಿಃ ||
ಅನಿರ್ದೇಶ್ಯವಪುಶ್ಶ್ರೀಮಾ, ನಮೇಯಾತ್ಮಾಮಹಾದ್ರಿಧೃತ್(ಕ್)[೪೦]||೧೯||

---

ಮ್ಮ ಅಧಿಕಾರಗಳಲ್ಲಿ ನೆಲೆಗೊಂಡಿರುವಂತೆ ಪ್ರಜೆಗಳನ್ನು ನಿಯಮಿಸುವವನು (ಯಮಃ) ಸರ್ವರ ಅಂತರಂಗದಲ್ಲಿದ್ದು ಅತಿಕ್ರಮಿಸದಂತೆ ಅಡಗಿಸುವ, ವಾ, ಅಡ್ಡಿಗಳನ್ನು ತೊಲಗಿಸಿ ಭಕ್ತರಕಾರ್ಯವನ್ನು ನೆರವೇರಿಸುವವನು (ವೇದ್ಯಃ) ಮೋಕ್ಷಾರ್ಥಿಗಳಿಂದ ಆವಶ್ಯಕವಾಗಿ ತಿಳಿಯಲ್ಪಡಬೇಕಾಗಿರುವ, ವಾ, ಅವತಾರಗಳನ್ನೆತ್ತಿ, ಸರ್ವರಿಗೂ ಸುಲಭವಾಗಿ ತಿಳಿಯಬರತಕ್ಕವನು (ವೈದ್ಯಃ) ವಿದ್ಯೆಗಳನ್ನೆಲ್ಲ ಬಲ್ಲ, ಅಥವಾ ಗಾಯತ್ರೀವಿದ್ಯೆಯೇಮೊದಲಾದ ಇಪ್ಪತ್ತು ನಾಲ್ಕು ವಿದ್ಯೆಗಳಿಂದ ಲಭಿಸುವವನು. (ಸದಾಯೋಗೀ) ಸರ್ವದಾ ಮುಕ್ತರಿಗೆ ಸಾಕ್ಷಾತ್ಕಾರವನ್ನು ತೋರಿರುವ, ವಾ, ಮನೋವೃತ್ತಿರಹಿತನಾದ, ವಾ, ಸರ್ವೋಪಾಯಸ್ವರೂಪನಾದ, ವಾ, ಸಂತತ ಹೃದಯದಲ್ಲಿ ಗೋಚರಿಸುವವನು. (ವೀರಹಾ) ಧರ್ಮರಕ್ಷಣೆಗಾಗಿ ಅಸುರವೀರರನ್ನು ಹನನ ಮಾಡುವವನು. (ಮಾಧವಃ) ಸರ್ವವಿದ್ಯೆಗಳಿಗೂ ಸ್ವಾಮಿಯೆನಿಸಿರುವ, ವಾ, ಲಕ್ಷ್ಮೀದೇವಿಯ ಪತಿಯಾದ, ವಾ, ಮಧುವಂಶದಲ್ಲಿ ಹುಟ್ಟಿದವನು. (ಮಧುಃ) ಅಮೃತದಂತೆ ಅಪಾರವಾದ ಪ್ರೀತಿಯನ್ನುಂಟುಮಾಡುವ, ವಾ, ಭಕ್ತರಿಗೆ ಅಮೃತವನ್ನು ಕೊಡುವವನು. (೨೦)

(ಅತೀಂದ್ರಿಯಃ) ಶಬ್ದಸ್ಪರ್ಶಗಳಿಲ್ಲದಿರುವುದರಿಂದ ಯಾವ ಇಂದ್ರಿಯಗಳಿಗೂ ಗೋಚರಿಸದಿರುವವನು. (ಮಹಾಮಾಯಃ) ಮಾಯಾವಿಗಳಿಗೂ ಮಾಯೆಯು ಕವಿಯುವಂತೆಮಾಡುವವನು. (ಮಹೋತ್ಸಾಹಃ) ಜಗದುತ್ಪತ್ತಿ ಸ್ಥಿತಿ ಲಯಗಳಿಗಾಗಿ ಉತ್ಸಾಹದಿಂದ ಉದ್ಯುಕ್ತನಾಗುವವನು. (ಮಹಾಬಲಃ) ಬಲವಂತರೆಲ್ಲರಿಗಿಂತಲೂ ಬಲಿಷ್ಠನಾದುದರಿಂದಲೇ ಅಸಹಾಯಶೂರನೆನಿಸಿದವನು. (ಮಹಾಬುದ್ಧಿಃ) ಬುದ್ಧಿವಂತರೆಲ್ಲರಿಗಿಂತಲೂ ಬುದ್ಧಿವಂತನಾದ, ವಾ, ಇಂದ್ರಿಯಗಳ ಸಹಾಯವಿಲ್ಲದೆಯೇ ಎಲ್ಲವನ್ನೂ ತಿಳಿಯುವವನು. (ಮಹಾವೀರ್ಯಃ ) ಉತ್ಪತ್ತಿಕಾರಣವಾಗಿರುವ ಅವಿದ್ಯಾಲಕ್ಷಣ ವೀರ್ಯವುಳ್ಳ, ವಾ, ವಿಕಾರವಿಲ್ಲದೆಯೇ ಜಗತ್ಕಾರಣನಾದವನು. (ಮಹಾಶಕ್ತಿಃ) ಪರಾಪೇಕ್ಷೆಯಿಲ್ಲದೆ ಸರ್ವಕಾರ್ಯ ನಿರ್ವಾಹಸಾಮರ್ಥ್ಯವುಳ್ಳವನು. (ಮಹಾದ್ಯುತಿಃ) ಒಳಗೂ ಹೊರಗೂ ಬೆಳಗುತಲಿರುವ ಜ್ಯೋತೀರೂಪನಾದವನು, ವಾ,ತೇಜಸ್ಸುಗಳಿಗೆಲ್ಲ ತೇಜಸ್ಸಾದವನು. (ಅನಿ

ಮಹೇಷ್ವಾಸೋ ಮಹೀಭರ್ತಾ ಶ್ರೀನಿವಾಸ ಸ್ಸತಾಂ ಗತಿಃ ||
ಅನಿರುದ್ಧ ಸ್ಸುರಾನನ್ದೋ ಗೋವಿನ್ದೋ ಗೋವಿದಾಂಪತಿಃ, [೯೦] ||೨೦||

---

ದೇಶ್ಯವಪುಃ) ಹೀಗಿರುವುದೆಂದು ತೋರಿಸಲಿಕ್ಕೂ, ಹೇಳಲಿಕ್ಕೂ ಅಸಾಧ್ಯವಾದ ದಿವ್ಯದೇಹವುಳ್ಳವನು. (ಶ್ರೀಮಾನ್) ಅಪರಿಮಿತೈಶ್ವರ್ಯಸಂಪನ್ನನಾದವನು, ವಾ, ಜ್ಞಾನರೂಪವಾದ ಸಂಪತ್ತುಳ್ಳವನು. (೮೦)

(ಅಮೇಯಾತ್ಮಾ) ಯಾವಪ್ರಾಣಿಗಳಿಂದಲೂ ಮತ್ತು ಯಾವಪ್ರಮಾಣಗಳಿಂದಲೂ ಊಹಿಸಿ ತಿಳಿಯಲು ಅಸಾಧ್ಯನಾದವನು. (ಮಹಾದ್ರಿಧೃತ್) ಸಾಗರಮಥನ ಸಮಯದಲ್ಲಿ ಮಹತ್ತರವಾದ ಮಂದರವನ್ನು ಅಥವಾ ಗೋಕುಲಸಂರಕ್ಷಣೆಗಾಗಿ ಗೋವರ್ಧನವನ್ನು ಧರಿಸಿದವ ನು. (ಮಹೇಷ್ವಾಸಃ) ವಿಫಲವಾಗದ ಬಾಣಮೋಕ್ಷಣವುಳ್ಳ, ಅಥವಾ ಮಹತ್ತರವಾದ ಬಿಲ್ಲುಳ್ಳವನು. (ಮಹೀಭರ್ತಾ) ಪ್ರಳಯದಲ್ಲಿ ಏಕಾರ್ಣವವಾದ ಜಲರಾಶಿಯೊಳಗೆ ಮುಳುಗಿದ ಭೂಮಿಯನ್ನು ಉದ್ಧರಿಸುವಂತವನು. (ಶ್ರೀನಿವಾಸಃ) ಎಡೆಬಿಡದೆ ಎದೆಯಲ್ಲಿ ವಾಸಿಸುತ್ತಿರುವ ಲಕ್ಷ್ಮೀದೇವಿಯುಳ್ಳವನು. (ಸತಾಂ ಗತಿಃ) ವೈದಿಕ ಧರ್ಮವನ್ನಾಚರಿಸುವ ಸಾಧುಗಳಿಗೆ ಪುರುಷಾರ್ಥಗಳನ್ನು ಕಲ್ಪಿಸಲು ದಿಕ್ಕಾಗಿರುವವನು. (ಅನಿರುದ್ಧಃ) ಅವತಾರವಿಶೇಷಗಳಲ್ಲಿ ಯಾರಿಂದಲೂ ಇದಿರಿಸಲಳವಲ್ಲದಸಾಮರ್ಥ್ಯವುಳ್ಳವನು, ವಾ, ಭಕ್ತರಾದ ಯೋಗಿಗಳಿಗೆ ಸಮಾಧಿಯಲ್ಲಿ ಅಖಂಡವಾಗಿ ಕಾಣಬರುವವನು. (ಸುರಾನಂದಃ) ದೇವತೆಗಳನ್ನೆಲ್ಲ ಆನಂದಗೊಳಿಸುವವನು. (ಗೋವಿಂದಃ) ಪೂರ್ವದಲ್ಲಿ ಗುಹೆಯೊಳಗೆ ಹೊಕ್ಕಿದ್ದ ಭೂದೇವಿಯನ್ನು ಮರಳಿ ಕರೆತಂದವನೆಂದು ಹೊಗಳಿಸಿಕೊಂಬ, ವಾ, ದೇವತೆಗಳಿಗೆಲ್ಲ ಸ್ವಾಮಿಯಾಗಿರುವ, ವಾ, ಇಂದ್ರನಂತೆ ವೇದದ ವಚನಗಳಿಗೆಲ್ಲ ಒಡೆಯನಾದ, ವಾ, ಭೂದೇವಿಯಿಂದಲೂ, ಶಬ್ದರಾಶಿಯಿಂದಲೂ ಸ್ತುತಿಸಲ್ಪಡುವವನು. (ಗೋವಿದಾಂಪತಿಃ) ವೇದವಿದರಿಗೆಲ್ಲ ಸ್ವಾಮಿಯಾದವನು. (೯೦)

(ಮರೀಚಿಃ) ತೇಜಸ್ವಿಗಳಿಗೆಲ್ಲ ತೇಜಸ್ಸನ್ನು ಕೊಡುವವನು, ವಾ, ಅಂಧರಾಗಿದ್ದರೂ ಭಕ್ತರಾದರೆ ತನ್ನರೂಪವನ್ನು ಪ್ರಕಾಶಪಡಿಸುವವನು. (ದಮನಃ) ತಂತಮ್ಮ ಧರ್ಮಾಧಿಕಾರದಿಂದ ಭ್ರಷ್ಟರಾಗುವ ಪ್ರಜೆಗಳನ್ನು ಮೃತ್ಯುರೂಪದಿಂದ ಅಡಗಿಸುವ ಸ್ವಭಾವವುಳ್ಳವನು. (ಹಂಸಃ) ಅವನೇ

ಮರೀಚಿ ರ್ದಮನೋ ಹಂಸ ಸ್ಸುಪರ್ಣೋ ಭುಜಗೋತ್ತಮಃ ||
ಹಿರಣ್ಯನಾಭ ಸ್ಸುತಪಾಃ ಪದ್ಮನಾಭಃ ಪ್ರಜಾಪತಿಃ | ||೭೧||
ಅಮೃತ್ಯು, ಸ್ಸರ್ವದೃ ಕ್ಸಿಂಹ ಸ್ಸಂಧಾತಾ ಸನ್ಧಿಮಾನ್ ಸ್ಥಿರಃ || [೧೦೦]

---

ನಾನು ಎಂಬದಾಗಿ ಅಭೇದಭಾವನೆಯಿಂದ ಉಪಾಸಿಸುವವರ ಸಂಸಾರ ಬಂಧನವನ್ನು ತೊಲಗಿಸುವ, ಅಥವಾ "ಹಂಸಶ್ಶುಚಿಷತ್" ಎಂಬಲ್ಲಿ ಹೇಳಿರುವಂತೆ ಸರ್ವರಹೃದಯದಲ್ಲಿಯೂ ಹರಡಿಕೊಂಡಿರುವವನು. (ಸುಪರ್ಣಃ) "ದ್ವಾಸುಪರ್ಣಾ" ಎಂಬಲ್ಲಿ ಹೇಳಿರುವಂತೆ ಶರೀರವೃಕ್ಷದಲ್ಲಿ ಎರಡು ಪಕ್ಷಿಗಳ ರೂಪದಿಂದಿರುವ, ವಾ, ಗರುತ್ಮಂತನ ರೂಪದಿಂದಿರುವ, ವಾ, ಸಂಸಾರಸಾಗರವನ್ನು ದಾಟಲು ಸಾಧನನಾಗಿರುವವನು. (ಭುಜಗೋತ್ತಮಃ) ಎದೆಯಿಂದ ಸರಿಯುವ ಅನಂತ, ವಾಸುಕಿ ಮೊದಲಾದವರಿಗೊಡೆಯನಾಗಿರುವ, ವಾ, ಶೇಷಪರ್ಯಂಕದಲ್ಲಿ ಪವಳಿಸಿರುವವನು. (ಹಿರಣ್ಯನಾಭಃ) ಸುವರ್ಣಮಯವಾದ ಅಥವಾ ರಮಣೀಯವಾದ ನಾಭಿಪ್ರದೇಶವುಳ್ಳವನು. (ಸುತಪಾಃ) ಬದರಿಕಾಶ್ರಮದಲ್ಲಿ ನರನಾರಾಯಣ ರೂಪದಿಂದಿದ್ದು, ಮನಸ್ಸಿನ ಮತ್ತು ಇಂದ್ರಿಯಗಳ ಏಕಾಗ್ರರೂಪದಿಂದ ಮಂಗಳಕರ ತಪವನ್ನಾಚರಿಸಿದ, ವಾ, ಮಂಗಳಜ್ಞಾನಕಾರಣನಾದವನು. (ಪದ್ಮನಾಭಃ) ಪದ್ಮದಂತೆ ವರ್ತುಲಾಕಾರವಾದ ನಾಭಿಯುಳ್ಳ, ಅಥವಾ ಹೃದಯಪದ್ಮದ ಮಧ್ಯದಲ್ಲಿ ಬೆಳಗುವವನು. (ಪ್ರಜಾಪತಿಃ) ಸರ್ವಪ್ರಜೆಗಳಿಗೂ ಪಿತೃವೆನಿಸಿರುವವನು. (ಅಮೃತ್ಯುಃ) ಸರ್ವವಿನಾಶಕ್ಕೂ ನಿಮಿತ್ತನಾಗಿರುವ, ವಾ, ಮೃತ್ಯುವಿಗೂ ಮೃತ್ಯುವೆನಿಸಿದ, ವಾ, ನಾಶರಹಿತನಾದವನು. (೭೦೦)

(ಸರ್ವದೃಕ್) ಸರ್ವಪ್ರಾಣಿಗಳ ಪಾಪಪುಣ್ಯಗಳನ್ನೆಲ್ಲ ಬಲ್ಲವನು. (ಸಿಂಹಃ) ಸ್ಮರಣಮಾತ್ರದಿಂದ ಸಮಸ್ತಪಾಪಗಳನ್ನೂ ನಾಶಗೊಳಿಸುವವನು. (ಸಂಧಾತಾ) ಪುರುಷರನ್ನು ಅವರವರ ಕರ್ಮಫಲಗಳಿಂದ ಸೇರಿಸುವವನು, ವಾ, ಭಕ್ತರಿಂದ ಆಲಿಂಗಿಸಲ್ಪಡುವವನು. (ಸಂಧಿಮಾನ್) ಸರ್ವಫಲಗಳ ಸಂಬಂಧವುಳ್ಳ, ಅಥವಾ ಸರ್ವಫಲಭೋಕ್ತೃವೆನಿಸಿದವನು, ವಾ, ಭಕ್ತರನ್ನಗಲದಿರುವವನು. (ಸ್ಥಿರಃ) ಸರ್ವದಾ ಏಕರೂಪದಿಂದಿರುವ, ವಾ, ಭಕ್ತರ ಅಪರಾಧವನ್ನು ಕ್ಷಮಿಸಿ ಅವರನ್ನು ಕಾಯುವವನು. (ಅಜಃ) ಯಾವುದನ್ನು ಎಲ್ಲಿ ಬೇಕಾದರೆ ಅಲ್ಲಿ ಇಡುವ, ವಾ, ಬೇರೊಂದುಸಾಧನವಿಲ್ಲದೆ ಎಲ್ಲಿಗೆ ಬೇಕಾದರೂ ತೆರಳುವ, ವಾ, ಅಯೋನಿಜನಾ

ಅಜೋ ದುರ್ಮರ್ಷಣ ಶ್ಶಾಸ್ತಾ ವಿಶ್ರುತಾತ್ಮಾ ಸುರಾರಿಹಾ, [೧೦] ||೨೨||
ಗುರು ಗುರ್ರುತಮೋ ಧಾಮ ಸತ್ಯ ಸ್ಸತ್ಯ ಪರಾಕ್ರಮಃ ||
ನಿಮಿಷೋಽನಿಮಿಷ ಸ್ಸ್ರಗ್ವೀ ವಾಚಸ್ಪತಿ ರುದಾರ ಧೀಃ ||೨೩||
ಅಗ್ರಣೀ, ರ್ಗ್ರಾಮಣೀ ಶ್ಶ್ರೀಮಾ ನ್ನ್ಯಾಯೋ ನೇತಾ ಸಮೀರಣಃ|| [೨೦]

---

ದವನು. (ದುರ್ಮರ್ಷಣಃ) ದಾನವರೇ ಮೊದಲಾದವರಿಂದ ಸಹಿಸಲಸದಳವಾದ ಶೌರ್ಯವುಳ್ಳವನು. (ಶಾಸ್ತಾ) ಶ್ರುತಿಸ್ಮೃತಿ ಮೊದಲಾದವುಗಳಿಂದ ಸರ್ವರಿಗೂ ಧರ್ಮಾಧರ್ಮಗಳನ್ನು ಶಾಸನ ಮಾಡುವ, ವಾ, ದುಷ್ಟರನ್ನು ಶಿಕ್ಷಿಸುವವನು. (ವಿಶ್ರುತಾತ್ಮಾ) ಸತ್ಯಜ್ಞಾನಾದಿ ಸ್ವರೂಪನಾದ ಆತ್ಮನೆಂದು ಸುಪ್ರಸಿದ್ಧನಾದವನು, ವಾ, ಭಕ್ತರಿಗೆ ಎಲ್ಲೆಲ್ಲಿಯೂ ಕಾಣಬರತಕ್ಕವನು. (ಸುರಾರಿಹಾ) ದೇವಶತ್ರುಗಳನ್ನೆಲ್ಲ ಧ್ವಂಸಮಾಡುವವನು (೧೦)

(ಗುರುರ್ಗುರುತಮಃ) ಸರ್ವವಿದ್ಯೋಪದೇಶಕರಾದ ಅಥವಾ ಸರ್ವಜಗತ್ಕರ್ತೃಗಳಾದ ಬ್ರಹ್ಮಾದಿಗಳಿಗೂ ಬ್ರಹ್ಮವಿದ್ಯೆಯನ್ನು ಉಪದೇಶಿಸಿದವನು. (ಧಾಮ) ಜ್ಯೋತಿಸ್ಸ್ವರೂಪನಾಗಿರುವ, ವಾ, ಸರ್ವಕಾಮಗಳಿಗೂ ಆಸ್ಪದನೆನಿಸಿದ, ವಾ, ಮತ್ಸ್ಯಾವತಾರದಲ್ಲಿ ನಾವೆಗೆ ಆಸರೆಯಾಗಿದ್ದವನು. (ಸತ್ಯಃ) ಸತ್ಯವಚನ ಲಕ್ಷಣವುಳ್ಳ ಧರ್ಮದಸ್ವರೂಪನಾಗಿರುವ, ವಾ, ಪ್ರಾಣರೂಪವಾಗಿರುವಸತ್ಯಕ್ಕೂ ಸತ್ಯವೆನಿಸಿದ, ವಾ, ಜಗತ್ತಿಗಿಂತಲೂ ವಿಲಕ್ಷಣ ಪರಮಾರ್ಥ ಸತ್ಯವಾಗಿರುವ, ವಾ, ಸತ್ಯವ್ರತರಿಗೆ ಶ್ರೇಯಸ್ಸನ್ನು ಕಲ್ಪಿಸುವವನು. (ಸತ್ಯಪರಾಕ್ರಮಃ) ವ್ಯರ್ಥವಾಗದ ಪರಾಕ್ರಮವುಳ್ಳವನು. (ನಿಮಿಷಃ) ಯೋಗನಿದ್ರೆಯಲ್ಲಿ ಮುಚ್ಚಿದಂತಿರುವ ನೇತ್ರಗಳುಳ್ಳವನು, ವಾ, ಭಕ್ತವಿರೋಧಿಗಳನ್ನು ಲಕ್ಷಿಸದಿರುವವನು. (ಅನಿಮಿಷಃ) ಯಾವಾಗಲೂ ಎಚ್ಚರಿಕೆಯಲ್ಲಿಯೇ ಇರುವ, ವಾ, ಮತ್ಸ್ಯಾವತಾರಿಯಾಗಿ ರೆಪ್ಪೆಬಡಿಯದಿರುವ, ವಾ, ಭಕ್ತರಯೋಗಕ್ಷೇಮವನ್ನು ಯಾವಾಗಲೂ ಕಟಾಕ್ಷಿಸುತ್ತಿರುವವನು. (ಸ್ರಗ್ವೀ) ರೂಪರಸಗಂಧಾದಿ ಭೂತತನ್ಮಾತ್ರೆಗಳ ರೂಪವಾದ ಹಾರವುಳ್ಳ, ವಾ, ವೈಜಯಂತಿಯೆಂಬ ದಿವ್ಯಮಾಲಿಕೆಯುಳ್ಳವನು. (ವಾಚಸ್ಪತಿಃ) ಸರ್ವವಿದ್ಯೆಗಳಿಗೂ ಅಧಿಪತಿಯೆನಿಸಿದವನು. (ಉದಾರಧೀಃ) ಸರ್ವಾರ್ಥಗಳನ್ನೂ ವಿಷಯೀಕರಿಸಿಕೊಂಡಿರುವ ಬುದ್ಧಿಯುಳ್ಳವನು. (ಅಗ್ರಣೀಃ)

ಸಹಸ್ರಮೂರ್ಧಾ ವಿಶ್ವಾತ್ಮಾ ಸಹಸ್ರಾಕ್ಷ ಸ್ಸಹಸ್ರಪಾತ್ ||೨೪||
ಆವರ್ತನೋ, ನಿವೃತ್ತಾತ್ಮಾ ಸಂವೃತ ಸ್ಸಂಪ್ರಮರ್ದನಃ ||[೩೦]

ಮುಮುಕ್ಷುಗಳನ್ನು ಉತ್ತಮಪದವೆನಿಸಿದ ಮುಕ್ತಿಸ್ಥಾನವನ್ನು ಸೇರಿಸುವವನು. (೨೦)

---

(ಗ್ರಾಮಣೀಃ) ಭೂತಗಳ ಸಮೂಹವನ್ನೆಲ್ಲ ಸಂಸಾರಿಗಳಿಗೆ ಹಂಚಿ ನಿಯಮಿಸುವವನು. (ಶ್ರೀಮಾನ್) ಸರ್ವಾತಿಶಯವೆನಿಸಿದ ಕಾಂತಿಯುಳ್ಳ, ವಾ, ಅಪಾರವಾದ ಐಶ್ವರ್ಯದಿಂದ ಪ್ರಕಾಶಿಸುವವನು. (ನ್ಯಾಯಃ) ಸರ್ವ ಪ್ರಮಾಣಗಳಿಗೂ ಇರುವ ತಾರತಮ್ಯವನ್ನು ಅನುಗ್ರಹಿಸಿ ತೋರುವ ತರ್ಕ ಸ್ವರೂಪನಾಗಿರತಕ್ಕವನು. (ನೇತಾ) ಜಗತ್ತನ್ನು ಸರಿಯಾದ ರೀತಿಯಲ್ಲಿ ನಡೆಸುವ ನಿರ್ವಾಹಶಕ್ತಿಯುಳ್ಳವನು, ವಾ, ಧರ್ಮಾಧರ್ಮವಿಚಾರದಲ್ಲಿ ನ್ಯಾಯರೂಪದಿಂದಿರುವವನು. (ಸಮೀರಣಃ) ವಾಯುರೂಪದಿಂದಿರುತ್ತಾ ಸರ್ವಪ್ರಾಣಿಗಳ ಚಲನೆಗೂ ಕಾರಣವಾಗಿರುವವನು. (ಸಹಸ್ರಮೂರ್ಧಾ) ಸಾವಿರ ಕಣ್ಣುಗಳಿಂದ ಅಥವಾ ಇಂದ್ರಿಯಗಳಿಂದ ನೆರವೇರುವ ನಿರ್ವಾಹ ಶಕ್ತಿಯುಳ್ಳವನು, ವಾ, ಸಾವಿರ ಶಿರಸ್ಸುಳ್ಳವನು. (ವಿಶ್ವಾತ್ಮಾ) ಪ್ರಪಂಚವನ್ನೇ ಆತ್ಮವಾಗಿ ಉಳ್ಳವನು, ವಾ, ಸಾವಿರಾರು ಶಿರಃಪಾದಾದಿಗಳಿಂದ ಅರ್ಜುನನಿಗೆ ವಿರಾಡ್ರೂಪವನ್ನು ತೋರಿದವನು. (ಸಹಸ್ರಾಕ್ಷಃ) ಸಂಸಾರಚಕ್ರವನ್ನು ಸುತ್ತಿಸುತ್ತಿರುವ ಸಾಮರ್ಥ್ಯವುಳ್ಳ, ವಾ, ಸಹಸ್ರನೇತ್ರಗಳುಳ್ಳವನು. (ಸಹಸ್ರಪಾತ್)ಸಂಸಾರಬಂಧದಿಂದ ನಿವೃತ್ತವಾದ ಸ್ವರೂಪವುಳ್ಳ, ವಾ, ಲೆಕ್ಕವಿಲ್ಲದ ಪಾದಗಳುಳ್ಳ, ವಾ, ಪಾದವಿಲ್ಲದಿದ್ದರೂ ಸರ್ವತ್ರ ಗಮನಶಕ್ತಿಯುಳ್ಳವನು. (ಆವರ್ತನಃ) ಸಂಸಾರಚಕ್ರವನ್ನು ತಿರುಗಿಸುತ್ತಿರುವವನು, ವಾ, ಕುಂಬಾರ ಮರದಂತಿಸ್ದು ಜಗತ್ತುಗಳೆಂಬ ಅರಗಳನ್ನು ತಿರುಗಿಸುವವನು. (೩೦)

(ನಿವೃತ್ತಾತ್ಮಾ) ಸಂಸಾರಬಂಧದಿಂದ ಹಿಂದಿರುಗಿದ ಸ್ವಭಾವವುಳ್ಳ ಎಂದರೆ ಬಂಧವಿಲ್ಲದವನು. (ಸಂವೃತಃ) ಪ್ರಪಂಚಕಾರಣವಾದ ಮಾಯೆಯಿಂದ ಆವರಿಸಲ್ಪಟ್ಟಿರುವ,ವಾ, ತಮೋಗುಣದಿಂದ ಮೂಢರಾದವರಿಗೆ ಮರೆಯಾಗಿರುವವನು. (ಸಂಪ್ರಮರ್ದನಃ) ರುದ್ರಕಾಲಾದಿ ರೂಪದಿಂದ ಪ್ರಪಂಚವನ್ನು ಪೀಡಿಸುವ, ವಾ, ದುಷ್ಟರನ್ನು ಮರ್ದಿಸುವವನು, ವಾ, ಭಕ್ತರ

ಅಹಸ್ಸಂವರ್ತಕೋ ವಹ್ನಿ ರನಿಲೋ ಧರಣೀಧರಃ ||೨೫||
ಸುಪ್ರಸಾದಃ ಪ್ರಸನ್ನಾತ್ಮಾ ವಿಶ್ವಸೃ, ಡ್ವಿಶ್ವ ಭುಗ್ವಿಭುಃ || [೪೦]
ಸತ್ಕರ್ತಾ ಸತ್ಕೃತ ಸ್ಸಾಧು ರ್ಜಹ್ನು ರ್ನಾರಾಯಣೋ ನರಃ. ||೨೬||

---

ತನೋಗುಣವನ್ನು ನಾಶಮಾಡತಕ್ಕವನು. (ಅಹಸ್ಸಂವರ್ತಕಃ) ಸೂರ್ಯ ರೂಪನಾಗಿ ದಿವಸಗಳನ್ನು ಪ್ರಕಾಶಪಡಿಸುವ, ವಾ, ಕಾಲಚಕ್ರವನ್ನು ನಡೆಸುವವನು. (ವಹ್ನಿಃ) ಮಂತ್ರಪೂರ್ವಕವಾಗಿ ಹವನ ಮಾಡಲ್ಪಟ್ಟದ್ದನ್ನೆಲ್ಲ ವಹಿಸುವವನು. (ಅನಿಲಃ) ಅನಾದಿಯಾಗಿರುವ, ವಾ, ಜಗತ್ತನ್ನು ಬದುಕಿರುವಂತೆ ಮಾಡುವವನು. (ಧರಣೀಧರಃ) ಶೇಷ, ದಿಗ್ಗಜ, ವರಾಹ ಮೊದಲಾದ ರೂಪದಿಂದ ಧರಣಿಯನ್ನು ಧರಿಸಿರುವವನು. (ಸುಪ್ರಸಾದಃ) ಅಪಕರಿಸಿದ ಶಿಶುಪಾಲ ಮುಂತಾದವರಿಗೂ ಪ್ರಸನ್ನತೆಯಿಂದ ಮುಕ್ತಿಯನ್ನಿತ್ತವನು, ವಾ, ಭಕ್ತರಲ್ಲಿ ಅತ್ಯಂತ ಪ್ರಸನ್ನತೆಯನ್ನು ತೋರುವವನು. (ಪ್ರಸನ್ನಾತ್ಮಾ) ರಜಸ್ತಮೋಗುಣಗಳಿಂದ ಮಾಲಿನ್ಯವನ್ನು ಹೊಂದದ ಅಂತಃಕರಣವುಳ್ಳ, ಅಥವಾ ಕರುಣಾರಸ ರೂಪನಾದ, ಅಥವಾ ಸರ್ವಕಾಮಗಳನ್ನೂ ಪಡೆದಿರುವವನು. (ವಿಶ್ವಸೃಟ್) ಪ್ರಪಂಚರೂಪ ಪ್ರಾಪ್ತಿಯನ್ನು ತೋರಿರುವ, ವಾ, ಸಮಸ್ತಪ್ರಪಂಚವನ್ನೂ ಧರಿಸಿರುವ, ವಾ, ಆಕ್ರಮಿಸಿರುವವನು. (೪೦)

(ವಿಶ್ವಭುಗ್ವಿಭುಃ) ಪ್ರಪಂಚವನ್ನೆಲ್ಲ ಅನುಭವಿಸುವ, ಅಥವಾ ಪಾಲಿಸುವ ಸ್ವಾಮಿಯಾಗಿ, ಹಿರಣ್ಯಗರ್ಭಾದಿ ರೂಪದಿಂದ ಬಗೆಬಗೆಯಾಗಿ ಆವಿರ್ಭವಿಸುವವನು. (ಸತ್ಕರ್ತಾ) ಎಲ್ಲವನ್ನೂ ಇರುವಂತೆ ಮಾಡುವ, ವಾ, ಭಕ್ತಾಗ್ರಗಣ್ಯರಿಂದ ವಿಶೇಷವಾಗಿ ಪೂಜಿಸಲ್ಪಡುವವನು. (ಸತ್ಕೃತಃ) ಪೂಜಿತರಿಂದಲೂ ಪೂಜಿಸಲ್ಪಡುವ, ವಾ, ಭಕ್ತಾಗ್ರಗಣ್ಯರಿಂದ ವಿಶೇಷವಾಗಿ ಪೂಜಿಸಲ್ಪಡುವವನು. (ಸಾಧುಃ) ಸರ್ವದಾ ನ್ಯಾಯಪ್ರವೃತ್ತನಾಗಿರುವ, ಅಥವಾ ಸಾಧಿಸಬೇಕಾದುವುಗಳನ್ನೆಲ್ಲ ಸಾಧಿಸುವ, ವಾ, ಅನನ್ಯಶರಣರಾದ ಭಕ್ತರಿಗೆ ಬಹು ಸುಲಭನಾಗಿ ಸಾರಥ್ಯವೇ ಮೊದಲಾದ ಕೆಲಸವನ್ನು ಮಾಡುವವನು. (ಜಹ್ನುಃ) ಸಂಹಾರ ಸಮಯದಲ್ಲಿ ಜನಗಳನ್ನೆಲ್ಲ ಅಡಗಿಸಿಬಿಡುವ, ಅಥವಾ ಭಜನೆಯಿಂದ ದೋಷಗಳನ್ನು ತೊಲಗಿಸಿ ಭಕ್ತರನ್ನು ಬಿಡದೆ ಪರಮಪದವನ್ನು ಸೇರಿಸುವ, ವಾ, ಭಕ್ತಿಶೂನ್ಯರಿಗೆ ಆವಾರ

ಅಸಂಖ್ಯೇಯೋಽಪ್ರಮೇಯಾತ್ಮಾ ವಿಶಿಷ್ಟ, ಶ್ಶಿಷ್ಟಕೃ ಚ್ಛುಚಿಃ ॥ [೫೦]
ಸಿದ್ಧಾರ್ಥ ಸ್ಸಿದ್ಧಸಂಕಲ್ಪ ಸ್ಸಿದ್ಧಿದ ಸ್ಸಿದ್ಧಿಸಾಧನಃ ॥೨೭॥
ವೃಷಾಹೀ ವೃಷಭೋ ವಿಷ್ಣು ರ್ವೃಷಪರ್ವಾ, ವೃಷೋದರಃ ॥[೬೦]

---

ಮಹಿಮೆಯನ್ನು ತಿಳಿಯಪಡಿಸುವವನು. (ನಾರಾಯಣಃ) ತನ್ನ ಕಾರ್ಯ ವಾಗಿರುವ ಆಕಾಶಾದಿಗಳಲ್ಲಿ ಕಾರಣರೂಪದಿಂದ ವ್ಯಾಪಿಸಿ ಅವುಗಳನ್ನು ಆಸರೆಯಾಗಿ ಮಾಡಿಕೊಂಡಿರುವ, ವಾ, ಜೀವರುಗಳಿಗೆಲ್ಲ ಆಶ್ರಯನಾಗಿರು ವ, ವಾ, ನಾರಗಳೇ ಎಂದರೆ ಜಲಗಳೇ ಶಯನಕ್ಕಾಗಿ ಆಶ್ರಯವಾಗಿರುವ, ವಾ, ಪರಮಾತ್ಮನೆನಿಸಿ ಸರ್ವಕ್ಕೂ ಅಯನ ಎಂದರೆ ಆಧಾರವಾಗಿರುವ, ವಾ, ಅಪರಿಮಿತೈಶ್ವರ್ಯಶಾಲಿಯಾದ, ವಾ, ನರರಿಗೆ ಸನ್ಮಾರ್ಗ ಸುಖಪ್ರದ ನಾದವನು, ವಾ. ಸರ್ವಸ್ವರೂಪನಾಗಿರುವವನು. (ನರಃ) ನಿತ್ಯನಾಗಿ ರುತ್ತಾ ಭಕ್ತರನ್ನು ಸದ್ಗತಿಯನ್ನು ಸೇರಿಸುವವನು. (ಅಸಂಖ್ಯೇ ಯಃ) ನಾಮ, ರೂಪ, ಸಂಖ್ಯೆ, ಕರ್ಮ, ಗುಣ ಮೊದಲಾದ ಭೇದಗಂಧ ವಿಲ್ಲದವನು. (ಅಪ್ರಮೇಯಾತ್ಮಾ) ಯಾವುದರಿಂದಲೂ ಅಳೆಯಲಿಕ್ಕಾಗ ದ ಸ್ವರೂಪವುಳ್ಳ, ವಾ, ಸಮಸ್ತಚೇತನರಲ್ಲಿಯೂ ಅಪರಿಮಿತವಾಗಿ ವ್ಯಾಪಿ ಸಿರುವವನು. (ವಿಶಿಷ್ಟಃ) ಸರ್ವಕ್ಕಿಂತಲೂ ಅತಿಶಯವಾದ ಮಹಿಮೆ ಯುಳ್ಳವನು. (೫೦)

(ಶಿಷ್ಟಕೃತ್) ಶ್ರೇಷ್ಠವಾದ ಶಾಸನವನ್ನು ಮಾಡುವ, ಅಥವಾ, ಶಿಷ್ಟರನ್ನು ಪಾಲಿಸುವ, ಅಥವಾ ಭಜನೆಯಿಂದ ಅಶಿಷ್ಟರನ್ನೂ ಶಿಷ್ಟರನ್ನಾಗಿ ಮಾಡುವವನು. (ಶುಚಿಃ) ಯಾವ ಬಗೆಯ ಲೇಪವೂ ಇಲ್ಲದಿರುವವನು. (ಸಿದ್ಧಾರ್ಥಃ) ಬೇಕಾದುದೇನೂ ಇಲ್ಲದಿರುವವನು, ವಾ, ಸಮಸ್ತಇಷ್ಟಾ ರ್ಥಗಳನ್ನೂ ಹೊಂದಿರುವನು. (ಸಿದ್ಧಸಂಕಲ್ಪಃ) ಕೋರಿಕೆಗಳನ್ನೆಲ್ಲ ಕೈಗೂಡಿಸಿಕೊಂಡಿರುವವನು. (ಸಿದ್ಧಿದಃ) ಭಜಕರ ಯೋಗ್ಯತೆಯನ್ನ ನುಸರಿಸಿ ಅವರ ಕೋರಿಕೆಗಳನ್ನು ಕೈಗೂಡಿಸುವವನು. (ಸಿದ್ಧಿಸಾಧನಃ) ಸಕಲ ಫಲ ಸಿದ್ಧಿಗಳಿಗೂ ಸಹಾಯಕನಾಗಿರುವವನು. (ವೃಷಾಹೀ) ಹಗ ಲಿನಂತೆ ಧರ್ಮವನ್ನು ಪ್ರಕಾಶಗೊಳಿಸುವ ಯಜ್ಞದ ಸ್ವರೂಪನಾಗಿರುವ ವನು. (ವೃಷಃ) ಭಕ್ತರ ಕಾಮಗಳನ್ನು ವರ್ಷಿಸುವವನು, ವಾ, ಭಕ್ತರ ತಾಪಗಳನ್ನೆಲ್ಲ ಶಮನಗೊಳಿಸುವವನು (ವಿಷ್ಣುಃ) ವಿಕ್ರಮನಿಪುಣನಾದ,

ವರ್ಧನೋ ವರ್ಧಮಾನಶ್ಚ ವಿವಿಕ್ತಶ್ಶ್ರುತಿಸಾಗರಃ ||೭೪||
ಸುಭುಜೋ ದುರ್ಧರೋ ವಾಗ್ಮೀ ಮಹೇಂದ್ರೋ ವಸುದೋ, ವಸುಃ ||[೭೦]
ನೈಕರೂಪೋ ಬೃಹದ್ರೂಪ ಶ್ಶಿಪಿವಿಷ್ಟಃ ಪ್ರಕಾಶನಃ ||೭೯||

---

ವಾ, ಭಕ್ತಾಭೀಷ್ಟವನ್ನು ವಿಶೇಷವಾಗಿ ಅನುಗ್ರಹಿಸುವವನು. (ವೃಷಪರ್ವಾ) ಧರ್ಮರೂಪವಾದ ಸೋಪಾನಗಳನ್ನು ಏರುತ ಬರುವ ಭಕ್ತರಿಗೆ ದೊರೆಯತಕ್ಕಪರಮಪದವೆನಿಸಿರುವ, ವಾ, ಸದ್ಗತಿಗೆ ಸಾಧಕವಾದ ವರ್ಣಾಶ್ರಮ ಧರ್ಮಸೋಪಾನಗಳನ್ನು ಕಲ್ಪಿಸಿರುವವನು. (೬೦)

(ವೃಷೋದರಃ) ಪ್ರಜೆಗಳನ್ನು ವರ್ಷಿಸುವಂತಿರುವ ಉದರವುಳ್ಳವನು, ವಾ, ಧರ್ಮಸ್ವರೂಪವಾದ ಗರ್ಭವುಳ್ಳ, ವಾ, ಭಕ್ತರು ಸಮರ್ಪಿಸುವ ಹವಿಸ್ಸುಗಳಿಗಾಧಾರವಾದ ಗರ್ಭವುಳ್ಳವನು. (ವರ್ಧನಃ) ನಂಬಿದವರನ್ನೆಲ್ಲ ವೃದ್ಧಿಗೊಳಿಸುವವನು. (ವರ್ಧಮಾನಃ) ಪ್ರಪಂಚರೂಪದಿಂದ ವೃದ್ಧಿಹೊಂದುವಂತಿರುವವನು. (ವಿವಿಕ್ತಃ) ಜಗದ್ರೂಪದಿಂದ ವೃದ್ಧಿಯನ್ನು ಹೊಂದುತ್ತಿದ್ದರೂ ಅದಕ್ಕೆ ಸೋಂಕದಂತಿರುವವನು. (ಶ್ರುತಿಸಾಗರಃ) ಸಮುದ್ರದಂತೆ ವಿಸ್ತಾರವಾದ ವೇದಗಳನ್ನು ಗರ್ಭದಲ್ಲಿ ಧರಿಸಿರುವ, ವಾ, ವೇದವೇದ್ಯನಾದವನು. (ಸುಭುಜಃ) ಜಗದ್ರಕ್ಷಣೆಯಲ್ಲಿ ಜಾಗರೂಕಗಳಾದ ಮಂಗಳಕರ ಬಾಹುಗಳುಳ್ಳವನು. (ದುರ್ಧರಃ) ಪರರಿಂದ ಧರಿಸಲಸದಳವೆನಿಸಿದ ಪೃಥಿವ್ಯಾದಿಗಳನ್ನು ಧರಿಸಿರುವ, ವಾ, ಪೃಥಿವ್ಯಾದಿಗಳನ್ನೆಲ್ಲ ಧರಿಸಿರುವವನಾದ ಕಾರಣವೇ ಇತರರಿಂದ ಧರಿಸಲಸಾಧ್ಯನಾಗಿರುವ, ವಾ, ಮುಮುಕ್ಷುಗಳಿಂದ ಧ್ಯಾನಸಮಯದೊಳಗೆ ಹೃದಯದಲ್ಲಿ ಕಷ್ಟದಿಂದ ಧರಿಸಲ್ಪಡುವವನು. (ವಾಗ್ಮೀ) ವೇದಮಯವಾದ ವಾಕ್ಕುಳ್ಳವನು, ವಾ, ಜಯ, ಮಧುರ, ಗಂಭೀರ, ಪ್ರಿಯ, ಹಿತಗೂಪವಾಕ್ಕುಳ್ಳವನು. (ಮಹೇಂದ್ರಃ) ಪರಮೈಶ್ವರ್ಯಶಾಲಿಗಳಾದ ಇಂದ್ರಾದಿಗಳಿಗಿಂತ ಪರಮೈಶ್ವರ್ಯಶಾಲಿಯಾದವನು. (ವಸುದಃ) ಭಕ್ತರಿಗೆ ಬೇಕಾದ ಧನವನ್ನೆಲ್ಲ ಕೊಡುವವನು. (೬೦)

(ವಸುಃ) ಭಕ್ತರಿಗೆ ಕೊಡುವ ಧನದ ಸ್ವರೂಪನಾಗಿಯೂ ಇರುವವನು, ವಾ ಮಾಯೆಯಿಂದ ಆತ್ಮಸ್ವರೂಪವನ್ನು ಮರೆಮಾಡಿಕೊಂಡಿರುವ, ವಾ, ಭಾಸ್ಕರರೂಪದಿಂದ ಅಂತರಿಕ್ಷದಲ್ಲಿ ವಾಸಿಸುವವನು. (ನೈಕರೂಪಃ)

ಓಜ ಸ್ತೇಜೋದ್ಯುತಿಧರಃ ಪ್ರಕಾಶಾತ್ಮಾ ಪ್ರತಾಪನಃ ||
ಋದ್ಧ ಸ್ಸ್ಪಷ್ಟಾಕ್ಷರೋ, ಮಂತ್ರ ಶ್ಚಂದ್ರಾಂಶು ರ್ಭಾಸ್ಕರದ್ಯುತಿಃ||೩೦||
ಅಮೃತಾಂಶೂದ್ಭವೋ ಭಾನು ಶ್ಶಶಬಿಂದು ಸ್ಸುರೇಶ್ವರಃ ||

---

ಮಾಯೆಯಿಂದ ಬಗೆಬಗೆಯಾದ ರೂಪನ್ನು ತಾಳುವವನು, ವಾ, ಭಕ್ತರು ಬಯಸುವ ಆಕಾರದಿಂದ ಕಾಣಿಸಿಕೊಳ್ಳುವವನು. (ಬೃಹದ್ರೂಪಃ) ವರಾಹ, ಸಿಂಹ ಮೊದಲಾದ ಮಹಾರೂಪನ್ನೊಳಗೊಂಡವನು. (ಶಿಪಿವಿಷ್ಟಃ) ಪಶುಗಳಲ್ಲಿ ಯಜ್ಞರೂಪದಿಂದ ನೆಲೆಗೊಂಡಿರುವ, ವಾ, ಕಿರಣಗಳೆನಿಸಿದ ಶಿಪಿಗಳ ಒಳಹೊಕ್ಕಿರುವ, ವಾ. ಶೈತ್ಯಗುಣಸಂಬಂಧದಿಂದ ಮತ್ತು ಶಯನ ಸಂಬಂಧವಿರುವುದರಿಂದಲೂ, ಶಿ, ಎಂದರೆ ಜಲ; ಅದನ್ನು ಪಾನಮಾಡುವುದರಿಂದ ಇಲ್ಲನೆ ಅದನ್ನು ರಕ್ಷಿಸುವ ದೆಸೆಯಿಂದಲೂ ಶಿಪಿಗಳೆಂದರೆ ರಶ್ಮಿಗಳು, ಅವುಗಳಲ್ಲಿ ಒಳಹೊಕ್ಕಿರುವವನು. (ಪ್ರಕಾಶನಃ) ಸರ್ವವನ್ನೂ ಪ್ರಕಾಶಗೊಳಿಸುವ ಸ್ವಭಾವವುಳ್ಳವನು, ವಾ, ವಿಶ್ವರೂಪದರ್ಶನಾಸಕ್ತನಾದ ಅರ್ಜುನನಿಗೆ ದಿವ್ಯದೃಷ್ಟಿಯನ್ನು ದಯಪಾಲಿಸಿದವನು. (ಓಜಸ್ತೇಜೊದ್ಯುತಿಧರಃ)ಪ್ರಾಣಶಕ್ತಿ ಎಂಬ ಓಜಸ್ಸು, ಶೌರ್ಯಾದಿ ಗುಣವೆಂಬ ತೇಜಸ್ಸು [ಹೊಳವು] ಪ್ರಕಾಶ [ಜ್ಞಾನಬಲ] ಎಂಬ ದ್ಯುತಿ [ಕಾಂತಿ] ಇವುಗಳನ್ನು ಧರಿಸಿರುವವನು. (ಪ್ರಕಾಶಾತ್ಮಾ) ಅನವಂತವಾ ಪ್ರಕಾಶಿಸುತ್ತಿರುವ ಸ್ವರೂಪವುಳ್ಳ ವಾ, ಮೂರ್ಖರಾದರೂ ಮರೆಹೊಕ್ಕರೆ ಬುದ್ಧಿಯನ್ನು ಪ್ರಕಾಶಗೊಳಿಸುವವನು. (ಪ್ರತಾಪನಃ) ಸೂರ್ಯ ಮೊದಲಾದ ರೂಪದಿಂದ ಪ್ರಪಂಚವನ್ನು ತಾಪಗೊಳಿಸುವವನು. (ಋದ್ಧಃ) ಧರ್ಮ, ಜ್ಞಾನ, ವೈರಾಗ್ಯ ಸಮೃದ್ಧಿಯುಳ್ಳವನು. (ಸ್ಪಷ್ಟಾಕ್ಷರಃ) ಸ್ಪಷ್ಟವಾಗಿ ಉದಾತ್ತಸ್ವರವೆನಿಸಿರುವ, ಓಂಕಾರಾಕ್ಷರದಿಂದ ಹೇಳಲ್ಪಡುವವನು. (೮೦)

(ಮಂತ್ರಃ) ಋಗ್ಯಜುಸ್ಸಾಮಲಕ್ಷಣದ ಮಂತ್ರಗಳಿಂದ ತಿಳಿಯಬರುವ, ವಾ, ಮನನಮಾಡಿದವರನ್ನು ರಕ್ಷಿಸುವ, ವಾ, ಮಂತ್ರರೂಪನಾಗಿರುವವನು. (ಚಂದ್ರಾಂಶುಃ) ಸಂಸಾರತಾಪವೆಂಬ ಆತಪದಿಂದ ತಪಿಸಿದ ಮನಸ್ಸುಳ್ಳವರಿಗೆ ಚಂದ್ರಕಿರಣದಂತೆ ಆಹ್ಲಾದವನ್ನುಂಟುಮಾಡುವವನು. (ಭಾಸ್ಕರದ್ಯುತಿಃ) ಭಾಸ್ಕರನ ಬೆಳಕಿನಂತೆ ಬೆಳಗುತ್ತಿರುವ, ವಾ, ಶತ್ರುಬಲವನ್ನು ತಿರಸ್ಕರಿಸುವ ತೇಜಸ್ಸುಳ್ಳವನು. (ಅಮೃತಾಂಶೂದ್ಭವಃ)

ಔಷಧಂ ಜಗತಸ್ಸೇತು ಸ್ಸತ್ಯ ಧರ್ಮ ಪರಾಕ್ರಮಃ, [೯೦] ॥೩೧॥
ಭೂತಭವ್ಯ ಭವನ್ನಾಥಃ ಪವನಃ ಪಾವನೋಽನಲಃ ॥

---

ಕಡಲನ್ನು ಕಡೆಯುತ್ತಿರುವಾಗ ಚಂದಿರನ ಉತ್ಪತ್ತಿಗೆ ಕಾರಣನಾದ, ವಾ ಚಂದ್ರೋತ್ಪತ್ತಿಗೆ ಕಾರಣನಾದ ಮನಸ್ಸುಳ್ಳವನು. (ಭಾನುಃ) ಅಂತರ್ಯಾಮಿಯಾಗಿರುತ್ತಾ ಸ್ವತೇಜಸ್ಸಿನಿಂದ ಸಮಸ್ತವನ್ನೂ ಪ್ರಕಾಶಗೊಳಿಸುತ್ತಿರುವವನು, ವಾ, ತೇಜೋರೂಪನಾದ ಸೂರ್ಯನಿಗೂ ತೇಜಸ್ಸೆನಿಸಿದವನು. (ಶಶಬಿಂದುಃ) ಮೊಲದಗುರುತುಳ್ಳ ಚಂದ್ರನಂತೆ ಪ್ರಜೆಗಳನ್ನೆಲ್ಲ ಸಸ್ಯವರ್ಗದ ಮೂಲಕ ಇಲ್ಲವೆ ಓಷಧಿಗಳ ಮೂಲಕ ಪೋಷಿಸುವವನು. (ಸುರೇಶ್ವರಃ) ಸೇವಿಸುವ ಮಾನವರಿಗೆ ಶುಭವನ್ನು ಕೊಡುವ ದೇವತೆಗಳಿಗೂ ದೇವನಾದವನು. (ಔಷಧಂ) ಸಂಸಾರವೆಂಬ ರೋಗದಿಂದ ನರಳುತ್ತಿರುವವರಿಗೆಲ್ಲ ಜೀವನೌಷಧದಂತಿರುವವನು. (ಜಗತಸ್ಸೇತುಃ) ಜಗತ್ತಿನಲ್ಲಿರುವ ಪದಾರ್ಥಗಳು ತಂತಮ್ಮ ಮೇರೆ ತಪ್ಪಿಹೋಗದಂತೆಯೂ, ವರ್ಣಾಶ್ರಮಧರ್ಮಗಳು ಪರಸ್ಪರ ಸಾಂಕರ್ಯವನ್ನು ಪಡೆಯದಂತೆಯೂ ಇರುವಂತೆ ನಿಯಮಿಸುವ, ವಾ, ಸಂಸಾರಸಾಗರದಲ್ಲಿ ಬಿದ್ದಿರುವವರು ಸೇವೆಯಿಂದ ಸಮುತ್ತೀರ್ಣರಾಗಲು ಸೇತುವೆಯಂತೆ ಆಧಾರವಾಗಿರುವವನು. (ಸತ್ಯಧರ್ಮಪರಾಕ್ರಮಃ) ವ್ಯರ್ಥವಾಗದ ಧರ್ಮ, ಜ್ಞಾನ, ಪರಾಕ್ರಮಗಳುಳ್ಳವನು.(೯೦)

(ಭೂತಭವ್ಯಭವನ್ನಾಥಃ) ಹುಟ್ಟಿದ, ಹುಟ್ಟುತ್ತಿರುವ, ಹುಟ್ಟುವ ಭೂತವರ್ಗವೆಂದೆಲ್ಲ ಕರೆಯಲ್ಪಡುತ್ತಿರುವ, ವಾ, ತ್ರೈಕಾಲಿಕವಸ್ತುಪ್ರಭುವಾದವನು. (ಪವನಃ) ಜಗತ್ತನ್ನು ಪವಿತ್ರಗೊಳಿಸುವ ಪವನನಿಗೂ ಪವನನೆನಿಸಿದ ವಾ, ವಾಯುವನ್ನು ಬೀಸುವಂತೆ ನಿಯಮಿಸುವವನು. (ಪಾವನಃ) ಜಗತ್ತನ್ನು ಪವಿತ್ರಗೊಳಿಸುವ ಗಂಗಾದಿ ಮಹಾನದಿಗಳಿಗೂ ಪವಿತ್ರತೆಯನ್ನುಂಟುಮಾಡಿರುವವನು. (ಅನಲಃ) ಪ್ರಾಣಗಳನ್ನು ತನ್ನಂತೆ ರಕ್ಷಿಸಿಕೊಳ್ಳುವ ಜೀವಸ್ವರೂಪನಾದ, ವಾ, ಪ್ರಾಣಗಳನ್ನು ಕಳೆಯುವ ಸ್ವಭಾವವುಳ್ಳ, ವಾ, ಯಾವುದರಿಂದಲೂ ತೃಪ್ತನಾಗದಿರುವ, ವಾ, ಜಗತ್ತೆಲ್ಲ ಜೀವಿಸಿರಲು ಮೂಲಕಾರಣನಾದ, ವಾ, ಭಕ್ತರಿಗೆ ಎಷ್ಟು ಉಪಕರಿಸಿದರೂ ತೃಪ್ತನಾಗದ, ವಾ, ಅಗ್ನಿಗೂ ಅಗ್ನಿಯಾಗಿರುವವನು. (ಕಾಮಹಾ) ಮುಮುಕ್ಷುಗಳಾದ ಭಕ್ತರ ಮುಕ್ತಿಗೆ ಪ್ರತಿಬಂಧಕಗಳಾದ ಕಾಮಗಳನ್ನೆಲ್ಲ ಅಡಗಿಸುವ, ವಾ, ಹಿಂಸಕರಾದ ನೀಚರ ಕೋರಿಕೆಗಳನ್ನೆಲ್ಲ ಭಂ

ಕಾಮಹಾ ಕಾಮಕೃತ್ಕಾಂತಃ ಕಾಮಃ ಕಾಮಪ್ರದಃ ಪ್ರಭುಃ, [೧೦೦] ||೩೨||
ಯುಗಾದಿ ಕೃದ್ಯುಗಾವರ್ತೊ ನೈಕಮಾಯೊ ಮಹಾಶನಃ ||
ಅದೃಶ್ಯೊ ವ್ಯಕ್ತರೂಪ ಶ್ಚ ಸಹಸ್ರ ಜಿದನಂತಜಿತ್ . ||೩೩||

---

ಗಪಡಿಸುವವನು. (ಕಾಮಕೃತ್) ಅತ್ಯಂತಸುಂದರನಾದವನು, ವಾ, ಪ್ರದ್ಯುಮ್ನನಿಗೆ ಜನಕನಾದವನು. (ಕಾಂತಃ) ಲಕ್ಷ್ಮೀವಲ್ಲಭನು, ವಾ, ಅತ್ಯಂತ ಇಷ್ಟನಾದವನು, ವಾ, ದಿವ್ಯಮಂಗಳವಿಗ್ರಹನಾದುದರಿಂದ ಸರ್ವಪ್ರೇಮಾಸ್ಪದನು. (ಕಾಮಃ) ಪುರುಷಾರ್ಥಕಾಮಿಗಳಿಂದ ಬೇಡಲ್ಪಡುವ, ವಾ, ಲೋಕಸೃಷ್ಟಿಯ ಕಾಮನೆಯುಳ್ಳವನು, ವಾ, ಭಕ್ತರಪ್ರೇಮವನ್ನು ಬಯಸುವನು, (ಕಾಮಪ್ರದಃ) ಬಗೆಬಗೆಯ ದೇವತಾರೂಪದಿಂದ ತನ್ನನ್ನು ಪೂಜಿಸುವವರಿಗೆ ಆಯಾಯದೇವತಾರೂಪದಿಂದ ಅವರ ಇಷ್ಟವನ್ನು ಪೂರ್ತಿ ಮಾಡುವವನು. (ಪ್ರಭುಃ) ಇಷ್ಟಬಂದ ವೇಳೆಯಲ್ಲಿ ತನಗೆ ಬೇಕಾದ ರೂಪಗಳನ್ನು ತಾಳುವವನು. (೩೦೦)

(ಯುಗಾದಿಕೃತ್) ಯುಗವೇ ಮೊದಲಾದ ಕಾಲಭೇದಕ್ಕೆ ಧರ್ಮಭೇದದಿಂದ ಕರ್ತೃವೆನಿಸಿರುವವನು, ವಾ, ಯುಗವೇಮೊದಲಾದ ಕಾಲದ ಆರಂಭಮಾಡುವವನು. (ಯುಗಾವರ್ತಃ) ಕೃತತ್ರೇತಾದಿಯುಗಗಳನ್ನು ಕಾಲರೂಪದಿಂದ ಪುನಃಪುನಃ ಸುತ್ತುವಂತೆ ಮಾಡುವವನು. (ನೈಕಮಾಯಃ) ನಾನಾವಿಧವಾದ ಮಾಯೆಗಳನ್ನೊಳಗೊಂಡಿರುವವನು, ವಾ, ಅಣು, ಮತ್ತು, ಕೃಶ, ಸ್ಥೂಲ ಇತ್ಯಾದಿ ಮಾಯಾರೂಪಗಳನ್ನು ತಾಳುವವನು. (ಮಹಾಶನಃ) ಪ್ರಳಯಕಾಲದಲ್ಲಿ ಸರ್ವವನ್ನೂ ಗ್ರಾಸಮಾಡುವವನು. (ಅದೃಶ್ಯಃ) ಚಕ್ಷುರಾದಿ ಇಂದ್ರಿಯಗಳಿಗೂ, ಬುದ್ಧಿಗೂ ಗೋಚರಿಸದಿರುವವನು. (ವ್ಯಕ್ತರೂಪಃ) ರಾಮಕೃಷ್ಣಾದ್ಯವತಾರಗಳಲ್ಲಿ ವ್ಯಕ್ತವಾದ ರೂಪವುಳ್ಳವನು, ವಾ, ಯೋಗಿಗಳಿಗೆ ವ್ಯಕ್ತವಾದ ರೂಪವನ್ನು ತೋರುವವನು. (ಸಹಸ್ರಜಿತ್) ಸಾವಿರಾರುಮಂದಿ ರಕ್ಕಸರನ್ನು ಜಯಿಸಿದವನು. ಸಾವಿರಾರು ಕಲ್ಪಗಳವರೆಗೂ ಯೋಗನಿದ್ರೆಯಲ್ಲಿರುವವನು. (ಅನಂತಜಿತ್) ಯುದ್ಧಕ್ರೀಡಾದಿಗಳಲ್ಲಿ ಅಚಿಂತ್ಯಶಕ್ತಿಯನ್ನು ತೋರಿ ಸರ್ವಭೂತಗಳನ್ನೂ ಗೆದ್ದಿರುವವನು, ವಾ, ಶಿಶುತ್ವದಲ್ಲಿಯೂ ಮಹಾಮಹಿಮೆಯನ್ನು ತೋರಿ ತಿಳಿಯಲಸಾಧ್ಯವಾದ ಸ್ವರೂಪವನ್ನುಳ್ಳವನು. (ಇಷ್ಟಃ) ಪರಮಾ

ಇಷ್ಟೋऽವಿಶಿಷ್ಟಃ ಶಿಷ್ಟೇಷ್ಟಃ ಶಿಖಂಡೀ ನಹುಷೋ ವೃಷಃ । [೧೮]
ಕ್ರೋಧಹಾ ಕ್ರೋಧಕೃತ್ಕರ್ತಾ ವಿಶ್ವಬಾಹು ರ್ಮಹೀಧರಃ॥೩೪॥
ಅಚ್ಯುತಃ, ಪ್ರಥಿತಃ ಪ್ರಾಣಃ ಪ್ರಾಣದೋ ವಾಸವಾನುಜಃ । [೨೦]

---

ನಂದಗೋಪನಾಗಿರುವುದರಿಂದ ಸರ್ವರಿಗೂ ಇಷ್ಟನಾಗಿರುವ, ವಾ, ಯಜ್ಞಗಳಲ್ಲಿ ಸೋಮಯಾಜಿಗಳಿಂದ ಪೂಜಿಸಲ್ಪಟ್ಟವನು. (ಅವಿಶಿಷ್ಟಃ) ಸರ್ವಕ್ಕೂ ಅಂತರ್ಯಾಮಿಯಾಗಿರುವುದರಿಂದ ಉತ್ಕೃಷ್ಟನೆನಿಸಿದ, ವಾ, ಸಮಾಧಿಕರಿಲ್ಲದವನು. (೧೮)

(ಶಿಷ್ಟೇಷ್ಟಃ) ವಿದ್ವಾಂಸರಿಂದ ವಿಶೇಷವಾಗಿ ಪ್ರೀತಿಸಲ್ಪಡುವ, ವಾ, ಜ್ಞಾನಿಗಳನ್ನು ವಿಶೇಷವಾಗಿ ಪ್ರೀತಿಸುವವನು, ವಾ, ಬ್ರಹ್ಮಾದಿಗಳಿಂದ ಪ್ರಾರ್ಥಿಸಲ್ಪಡುವ, ವಾ, ಮಾರ್ಕಂಡೇಯಾದಿಗಳಿಂದ ಪ್ರೀತಿಸಲ್ಪಡುವವನು, (ಶಿಖಂಡೀ) ಗೋಪಕುಮಾರನಾಗಿದ್ದಾಗ ನವಿಲಿನ ತಲೆಯ ಕೂದಲನ್ನು ಅಲಂಕಾರಕ್ಕಾಗಿ ಧರಿಸಿದ್ದವನು, ವಾ, ಪರಮತೇಜಸ್ವಿಯಾದವನು. (ನಹುಷಃ) ಸಕಲಪ್ರಾಣಿಗಳನ್ನೂ ಮಾಯೆಯಿಂದ ಹೊದಿಸಿಬಿಡುವ ಎಂದರೆ ಎಲ್ಲರಿಗೂ ಮಾಯಾವರಣವನ್ನು ಕಲ್ಪಿಸುವವನು. (ವೃಷಃ) ಸತ್ಕರ್ಮಗಳನ್ನು ಮಾಡುವವರಿಗೆ ಸಮಸ್ತಕಾಮಗಳನ್ನೂ ಕಲ್ಪಿಸಿಕೊಡುವ ಧರ್ಮಸ್ವರೂಪನಾಗಿರತಕ್ಕವನು, ವಾ, ಭಕ್ತರಿಗೆ ಅಮೃತವನ್ನು ವರ್ಷಿಸುವವನು. (ಕ್ರೋಧಹಾ) ಸಾಧುಗಳಿಗೆ ಕೋಪವುಂಟಾಗದಂತೆ ಅನುಗ್ರಹಿಸುವವನು, ವಾ, ಇಪ್ಪತ್ತೊಂದುಸಾರಿ ಕ್ರೋಧದಿಂದ ಕ್ಷತ್ರಿಯರನ್ನು ಅಡಗಿಸಿದವನು. (ಕ್ರೋಧಕೃತ್) ಅಸಾಧುಗಳನ್ನು ಶಿಕ್ಷಿಸುವುದಕ್ಕಾಗಿ ಸಿಟ್ಟುಗೊಳ್ಳುವವನು. (ಕರ್ತಾ) ಜಗತ್ತಿನ ನಿರ್ಮಾಣರೂಪವಾದ ಕರ್ಮಕ್ಕೆ ಕರ್ತೃವು ಎಂದು ಎಲ್ಲರಿಂದಲೂ ತಿಳಿಯಲ್ಪಡುವ, ವಾ, ಕ್ರೋಧವನ್ನು ಮಾಡುವ ದೈತ್ಯರೇ ಮೊದಲಾದವರನ್ನು ಛೇದಿಸಿಬಿಡುವವನು. (ವಿಶ್ವಬಾಹುಃ) ಪ್ರಪಂಚಕ್ಕೇ ಆಸರೆಯಾಗಿರುವ ತೋಳುಗಳುಳ್ಳ, ವಾ, ತೋಳುಬಲದಿಂದ ಸಮಸ್ತಪ್ರಪಂಚವನ್ನೂ ರಕ್ಷಿಸುತ್ತಿರುವ, ವಾ, ವಿಶ್ವರೂಪದಲ್ಲಿ ಸರ್ವತೋಮುಖವಾದ ಬಾಹುಗಳುಳ್ಳವನು. (ಮಹೀಧರಃ) ಮಹೀ ಎಂದರೆ ಭಕ್ತರಿಂದ ಪೂಜೆಯನ್ನು, ಅಥವಾ, ಧರಣಿಯನ್ನು ಧರಿಸುತ್ತಿರುವವನು. (ಅಚ್ಯುತಃ) ಇದಾನೆ, ಬೆಳೆಯುತ್ತಾನೆ, ರೂಪಾಂತರವನ್ನು ಹೊಂದು

ಅಪಾಂನಿಧಿ ರಧಿಷ್ಠಾನ ಮಪ್ರಮತ್ತಃ ಪ್ರತಿಷ್ಠಿತಃ ॥೩೯॥
ಸ್ಕಂದಃ ಸ್ಕಂದ ಧರೋ, ಧುರ್ಯೋ ವರದೋ ವಾಯು ವಾಹನಃ । [೩೦]
ವಾಸುದೇವೋ ಬೃಹದ್ಭಾನು ರಾದಿದೇವಃ ಪುರಂದರಃ ॥೩೬॥

---

ತ್ತಾನೆ, ಬತವಾಗುತ್ತಾನೆ, ಕಳೆಗುಂದುತ್ತಾನೆ, ನಾಶವಾಗುತ್ತಾನೆ. ಎಂಬ ಆರುಬಗೆಯಾದ ಭಾವವಿಕಾರಗಳಲ್ಲೊಂದನ್ನೂ ಹೊಂದದಿರುವವನು (೨೦)

(ಪ್ರಥಿತಃ) ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳನ್ನು ಕಲ್ಪಿಸುವುದ ರಲ್ಲಿ ಪ್ರಖ್ಯಾತನಾದವನು. (ಪ್ರಾಣಃ) ಸೂತ್ರಾತ್ಮನಾಗಿ ಸರ್ವವನ್ನೂ ಬದುಕಿರುವಂತೆ ಮಾಡುತ್ತಿರುವವನು, ವಾ, ಆಶ್ರಿತರಿಗೆ ಜೀವನಸ್ಥಾನವೆನಿ ಸಿದವನು. (ಪ್ರಾಣದಃ) ಸುರರಿಗೂ, ಅಸುರರಿಗೂ ಯೋಗ್ಯ ತಾನುಸಾರ ವಾಗಿ ಪ್ರಾಣಬಲವನ್ನು ಅನುಗ್ರಹಿಸುತ್ತಿರುವವನು (ವಾಸವಾನುಜಃ) ಅದಿತಿಯಲ್ಲಿ ಕಶ್ಯಪನಿಂದ ಇಂದ್ರನಿಗೆ ಅನುಜನಾಗಿ ಅವತರಿಸಿದವನು. (ಅಪಾಂನಿಧಿಃ) ಎಲ್ಲಕ್ಕೂ ಮೂಲವಾದ ಜಲರಾಶಿಗೂ ಆಶ್ರಯನಾಗಿರುವ ವನು, ವಾ, ಕರ್ಮಗಳಿಗೂ ಪವಿತ್ರಗುಣಗಳಿಗೂ ನಿಧಿಯಂತಿರುವವನು. (ಅಧಿಷ್ಠಾನಂ) ಸರ್ವಕ್ಕೂ ಆಧಾರೆಯಾಗಿದ್ದುಕೊಂಡು ಎಲ್ಲವನ್ನೂ ಕಾಣ ಬರುವಂತೆ, ಅಥವಾ ತೋರಿಬರುವಂತೆ, ಇಲ್ಲವೆ ತಿಳಿದುಬರುವಂತೆ ಮಾಡು ವವನು. (ಅಪ್ರಮತ್ತಃ) ಅಧಿಕಾರಿಗಳಿಗೆ ಅವರವರ ಕರ್ಮಾನುಗುಣವಾಗಿ ಫಲವನ್ನು ಕೊಡುವವಿಷಯದಲ್ಲಿ ಎಚ್ಚರ ತಪ್ಪದಿರುವವನು. (ಪ್ರತಿಷ್ಠಿತಃ) ಮತ್ತಾವ ಆಧಾರವೂ ಇಲ್ಲದೆ ಸ್ವಮಹಿಮೆಯಲ್ಲಿಯೇ ನೆಲೆಗೊಂಡಿರುವವನು. (ಸ್ಕಂದಃ) ಜಲರೂಪವಾಗಿ ವರ್ಷಿಸುವ ಮತ್ತು ವಾಯುರೂಪದಿಂದ ಶೋ ಷಿಸುವವನು. (ಸ್ಕಂದಧರಃ) ಸ್ಕಂದ ಎಂದರೆ ಧರ್ಮಮಾರ್ಗವನ್ನು, ಧರಃ ಧರಿಸಿರುವವನು. (೩೦)

(ಧುರ್ಯಃ) ಸಮಸ್ತಭೂತಗಳನ್ನೂ ಹುಟ್ಟಿಸುವ, ಕಾಪಾಡುವ ಮತ್ತು ಹಾಳುಮಾಡುವ ಕೆಲಸದ ಹೊರೆಯನ್ನು ಹೊತ್ತಿರುವವನು. (ವರ ದಃ) ಭಕ್ತರು ಕೋರುವವರಗಳನ್ನೆಲ್ಲ ದಯಪಾಲಿಸುವ, ಅಥವಾ, ಯಜ್ಞ ಗಳಲ್ಲಿ ಯಜಮಾನರೂಪದಿಂದ ಗೋಧನರೂಪವಾದ ದಕ್ಷಿಣೆಯನ್ನು ದಾನ ಮಾಡುವವನು. (ವಾಯುವಾಹನಃ) ಆವಹ, ವಿವಹ, ಪರಿವಹ, ಪರಾವಹ, ಸಂವಹ, ಪ್ರವಹ, ಉದ್ವಹ, ಎಂಬ ಏಳು ಬಗೆಯ ವಾಯುಮಂಡಲ

ಅಶೋಕ ಸ್ತಾರಣ ಸ್ತಾರ, ಶ್ಯೂರ ಶ್ಯೌರಿ ರ್ಜನೇಶ್ವರಃ ॥ [೪೦] ...
ಅನುಕೂಲ ಶ್ಶತಾವರ್ತಃ ಪದ್ಮೀ ಪದ್ಮ ನಿಭೇಕ್ಷಣಃ ॥ ೪೧ ॥ ...

ಗಳನ್ನೂ ನೆಲೆಗೊಳಿಸಿರುವವನು. (ವಾಸುದೇವಃ) ಎಲ್ಲದರ ಒಳಗೂ ಹೊರಗೂ ವ್ಯಾಪಿಸುವವನಾಗಿ, ಸೂರ್ಯನ ಕಿರಣಗಳು ಹೇಗೋಹಾಗೆ ತಾನೂ ಬೆಳಗಿ, ಎಲ್ಲವನ್ನೂ ಬೆಳಗಿಸುತ್ತ, ಬಗೆಬಗೆಯಾಗಿ ವಿಹರಿಸುತ್ತ, ಎಲ್ಲವನ್ನೂ ಜಯಿಸುತ್ತ, ನಾನಾವಿಧವಾಗಿ ವ್ಯವಹರಿಸುತ್ತ, ವಿವಿಧವಾಗಿ ತೋರುತ್ತ, ಎಲ್ಲವನ್ನೂ ಉಂಟುಮಾಡುತ್ತ, ಎಲ್ಲಕ್ಕೂ ಆಸರೆಯಾಗಿ ಎಲ್ಲದರಲ್ಲಿಯೂ ಇರುತ್ತಿರುವ ದೇವನಾದವನು. (ಬೃಹದ್ಭಾನುಃ) ಸೂರ್ಯಚಂದ್ರರಿಗಿಂತಲೂ ಅತಿಶಯವಾದ ಕಿರಣಗಳನ್ನೊಳಗೊಂಡಿರುವವನು. (ಆದಿದೇವಃ) ಎಲ್ಲ ದೇವರುಗಳಿಗಿಂತಲೂ ಮೊದಲನೆಯ ದೇವನೆನಿಸಿರುವ, ಅಥವಾ ಸರ್ವಮೂಲದೇವನಾದವನು. (ಪುರಂದರಃ) ಹಗೆಗಳಾದ ರಕ್ಕಸರ ಪುರಗಳನ್ನೆಲ್ಲ ಧ್ವಂಸಮಾಡುವವನು, ವಾ, ತ್ರಿಪುರಗಳೇ ಮೊದಲಾದ ಶತ್ರುಪುರಗಳನ್ನು ನಾಶಗೊಳಿಸಿದವನು. (ಅಶೋಕಃ) ಯಾವವಿಧವಾದ ಶೋಕದ ಸಂಬಂಧವೂ ಇಲ್ಲದವನು. (ತಾರಣಃ) ಭಕ್ತರನ್ನು ಸಂಸಾರವೆಂಬ ಸಾಗರದಿಂದ ದಾಟಿಸುವವನು. (ತಾರಃ) ಗರ್ಭ, ಜನ್ಮ, ಜರೆ, ಮೃತ್ಯು ಈ ಮೊದಲಾದವುಗಳ ಭಯವಿಲ್ಲದಂತೆ ಭಕ್ತರನ್ನು ದಾಟಿಸುವವನು. (೪೦)

(ಶೂರಃ) ಎಲ್ಲರನ್ನೂ ಮೀರಿದ ವಿಕ್ರಮದಿಂದ ಸಂಪನ್ನನಾದವನು. (ಶೌರಿಃ) ಶೂರನೆಂಬ ಗೋಪರಾಜನ ಕುಲದಲ್ಲಿ ಅವತರಿಸಿದವನು. (ಜನೇಶ್ವರಃ) ಜನ್ಮವನ್ನು ಪಡೆದಿರುವ ಸಮಸ್ತಜನರಿಗೂ, ಜಂತುಗಳಿಗೂ ಈಶ್ವರನಾಗಿರುವವನು. (ಅನುಕೂಲಃ) ಸರ್ವರಿಗೂ ಆತ್ಮನಾಗಿ ಅನುಕೂಲ್ಯವನ್ನು ಕಲ್ಪಿಸುತ್ತಿರುವವನು. (ಶತಾವರ್ತಃ) ಧರ್ಮಸಂರಕ್ಷಣೆಗಾಗಿ ನೂರಾರು ಅವತಾರಗಳನ್ನೆತ್ತುವ, ವಾ, ದೇಹದನಾಡೀಶತದಲ್ಲಿಯೂ ಪ್ರಾಣರೂಪದಿಂದ ವ್ಯಾಪಿಸಿರುವವನು. (ಪದ್ಮೀ) ಪದ್ಮವನ್ನು ಹಸ್ತದಲ್ಲಿ ಧರಿಸಿರುವವನು. (ಪದ್ಮನಿಭೇಕ್ಷಣಃ) ಪದ್ಮಸದೃಶವಾದ ನೇತ್ರವುಳ್ಳವನು. (ಪದ್ಮನಾಭಃ) ಪದ್ಮದ ಮಧ್ಯಭಾಗವಾದ ನಾಭಿಸ್ಥಾನದಲ್ಲಿ ಕುಳಿತಿರುವ, ವಾ, ಹದಿನಾಲ್ಕುಲೋಕಗಳ ರೂಪವಾಗಿರುವ ಪದ್ಮವೇ ನಾಭಿಸ್ಥಾನದಲ್ಲಿರುವ,

ಪದ್ಮನಾಭೋ ರವಿಂದಾಕ್ಷಃ ಪದ್ಮಗರ್ಭ, ಶ್ಶರೀರ ಭೃತ್ । [೫೦]
ಮಹರ್ದ್ಧಿ ಋದ್ಧೋ ವೃದ್ಧಾತ್ಮಾ ಮಹಾಕ್ಷೋ ಗರುಡಧ್ವಜಃ ॥೫೪॥
ಅತುಲ ಶ್ಶರಭೋ ಭೀಮ ಸ್ಸಮಯಜ್ಞೋ, ಹವಿ ರ್ಹರಿಃ । [೬೦]

---

ವಾ, ಕೆಂದಾವರೆಯಂತೆ ಅಂದವಾದ ಕಣ್ಣುಗಳನ್ನುಳ್ಳವನು. (ಅರವಿಂದಾಕ್ಷಃ) ಅರವಿಂದವನ್ನು ಹೋಲುತ್ತಿರುವ ಅಕ್ಷಿಗಳುಳ್ಳವನು. (ಪದ್ಮಗರ್ಭಃ) ಹೃದಯಪದ್ಮದ ಗರ್ಭದಲ್ಲಿ ಎಂದರೆ ಮಧ್ಯದಲ್ಲಿ ಯೋಗಿಗಳಿಂದ ಉಪಾಸಿಸಲ್ಪಡುವವನು. (೫೦)

(ಶರೀರಭೃತ್) ಶರೀರಧಾರಿಗಳ ಶರೀರಗಳನ್ನು ಅನ್ನರೂಪದಿಂದ ಪೋಷಿಸುವ, ವಾ, ಸ್ವಮಾಯೆಯಿಂದ ಅನೇಕವಿಧವಾದ ಶರೀರಗಳನ್ನು ಧರಿಸುವವನು. (ಮಹರ್ಧಿಃ) ಮಹತ್ತರಗಳಾದ ಭೂತಗಳ ರೂಪವಾಗಿರುವ ವಿಭೂತಿಯುಳ್ಳವನು, [ವಿಭೂತಿಃ ಐಶ್ವರ್ಯವು.] (ಋದ್ಧಃ) ಪ್ರಪಂಚರೂಪದಿಂದ ಅಭಿವೃದ್ಧಿಯನ್ನು ಹೊಂದುತ್ತಿರುವವನು, ವಾ, ಭಕ್ತರ ಅಭಿವೃದ್ಧಿಯನ್ನು ತನ್ನ ಸಮೃದ್ಧಿಯೆಂದು ಭಾವಿಸುವವನು. (ವೃದ್ಧಾತ್ಮಾ) ಪುರಾತನನಾದ ಆತ್ಮನಾಗಿರುವವನು. (ಮಹಾಕ್ಷಃ) ಸ್ತೋತ್ರಾರ್ಹವಾದ ನೇತ್ರಗಳನ್ನು ಅಥವಾ ಇಂದ್ರಿಯಗಳನ್ನು ಒಳಗೊಂಡಿರುವವನು. (ಗರುಡಧ್ವಜಃ) ಗರುಡನ ಗುರುತಿನ ಧ್ವಜವನ್ನು ಪಡೆದಿರುವವನು. (ಅತುಲಃ) ಅಸಮಾನವಾದ ಸ್ವರೂಪವುಳ್ಳವನು. (ಶರಭಃ) ಶರೀರಗಳೊಳಗೆ ನಾಶವಾಗದ ಆತ್ಮರೂಪದಿಂದ ಬಾಸಮಾನನಾಗಿರುವವನು, ವಾ, ತನ್ನ ಆಜ್ಞೆಯನ್ನು ಮೀರತಕ್ಕವರಿಗೆ ಶಿಕ್ಷಕನು, ವಾ, ಬಾಣದಂತೆ ವೇಗಶಾಲಿ. (ಭೀಮಃ) ಸರ್ವವನ್ನೂ ಭಯಪಡಿಸುವ ಸ್ವಭಾವವುಳ್ಳ, ವಾ, ಸನ್ಮಾರ್ಗಪ್ರವೃತ್ತರಿಗೆ ಶಾಂತರೂಪನಾಗಿರುವವನು (ಸಮಯಜ್ಞಃ) ಸೃಷ್ಟಿ, ಸ್ಥಿತಿ ಲಯಗಳ ಸಮಯಗಳನ್ನು ಬಲ್ಲವನಾಗಿರುವ, ವಾ, ಎಲ್ಲ ಭೂತಗಳಿಂದಲೂ ಸಮಾನನಾದ ಪೂಜೆಯನ್ನು ಪಡೆಯುತ್ತಿರುವವನು. (೬೦)

(ಹವಿರ್ಹರಿಃ) ಯಜ್ಞಗಳಲ್ಲಿ ಹವಿರ್ಭಾಗಗಳನ್ನು ಸ್ವೀಕರಿಸುವ, ವಾ, ಯಜ್ಞದಲ್ಲಿ ಹವನಮಾಡುವ ಹವಿಯರೂಪನಾಗಿಯೂ, ಸ್ಮರಿಸುವವರ ಪಾಪವನ್ನು ಹರಿಸುವವನಾಗಿಯೂ, ವಾ, ಯಜ್ಞಭಾಗವನ್ನು ಗ್ರಹಿ

ಸರ್ವಲಕ್ಷಣ ಲಕ್ಷಣ್ಯೋ ಲಕ್ಷ್ಮೀವಾನ್ ಸಮಿತಿಂಜಯಃ ||೩೯||
ವಿಕ್ಷರೋ ರೋಹಿತೋ ಮಾರ್ಗೋ ಹೇತು ರ್ದಾಮೋದರಸ್ಸಹಃ||[೬೦]
ಮಹೀಧರೋ ಮಹಾಭಾಗೊ ವೇಗವಾ ನಮಿತಾಶನಃ ||೪೦||

---

ಸುವವನಾಗಿಯೂ ಇರುವವನು, ವಾ, ಹಸಿರುಬಣ್ಣವನ್ನು ಹೊಂದಿರುವವನು. (ಸರ್ವಲಕ್ಷಣಲಕ್ಷಣ್ಯಃ) ಸರ್ವಲಕ್ಷಣಗಳಿಂದಲೂ, ಪ್ರಮಾಣಗಳಿಂದಲೂ ತಿಳಿಯಲಿಕ್ಕೆ ಯೋಗ್ಯವಾದ ಲಕ್ಷಣವನ್ನೊಳಗೊಂಡಿರುವವನು. (ಲಕ್ಷ್ಮೀವಾನ್) ಎಲ್ಲ ಸಮಯಗಳಲ್ಲಿಯೂ ವಕ್ಷಸ್ಥಲದಲ್ಲಿ ಲಕ್ಷ್ಮೀದೇವಿಯನ್ನು ಧರಿಸಿರುವವನು. (ಸಮಿತಿಂಜಯಃ) ಎಲ್ಲ ಬಗೆಯಾದ ಯುದ್ಧಗಳನ್ನೂ ಗೆದ್ದಿರುವವನು. (ವಿಕ್ಷರಃ) ಎಂದೆಂದಿಗೂ ನಾಶವಿಲ್ಲದವನು. (ರೋಹಿತಃ) ಲೋಕರಕ್ಷಣೆಗಾಗಿ ಸ್ವೇಚ್ಛೆಯಿಂದ ಮತ್ಸ್ಯಾವತಾರವನ್ನು ಧರಿಸಿದವನು, ವಾ, ಪ್ರಪಂಚರೂಪವಾದ ಅಂಕುರಕ್ಕೆ ಕಾರಣನು. (ಮಾರ್ಗಃ) ಮುಮುಕ್ಷುಗಳಿಂದಹುಡುಕಲ್ಪಡುವ, ಅಥವಾ, ಉಪಾಸಕರಿಗೆ ಸ್ವಪ್ರಾಪ್ತಿಸಾಧಕವಾದ ಮಾರ್ಗವಾಗಿರುವವನು. (ಹೇತುಃ) ಸರ್ವಕಾರ್ಯ ಪರಿಣಾಮ ಮತ್ತು ನಿಮಿತ್ತ ಕಾರಣರೂಪವಾಗಿರುವವನು. (ದಾಮೋದರಃ) ಶಮದಮಾದಿ ಸಾಧನೆಗಳ ಮೂಲಕ ಪಡೆಯಬೇಕಾಗಿರುವ ಉತ್ಕೃಷ್ಟಸ್ಥಾನವಾಗಿರುವ, ವಾ, ಯಶೋದೆಯಿಂದ ಹಗ್ಗದಿಂದ [ ಟೊಂಕದಲ್ಲಿ] ಬಂಧಿಸಲ್ಪಟ್ಟ, ವಾ, ಲೋಕನಾಮಗಳನ್ನೆಲ್ಲ ಉದರದಲ್ಲಿಧರಿಸಿರುವವನು. (ಸಹಃ) ಎಲ್ಲರನ್ನೂ ತಿರಸ್ಕರಿಸುವಷ್ಟು ಸಾಮರ್ಥ್ಯವನ್ನು ಪಡೆದಿರುವ, ಅಥವಾ,ಭಕ್ತರ ಅಪರಾಧಗಳನ್ನು ಕ್ಷಮಿಸುವವನು. (೬೦)

(ಮಹೀಧರಃ) ಗಿರಿಗಳರೂಪದಿಂದ ಭೂಮಿಯನ್ನು ಧರಿಸಿರುವ, ವಾ ವರಾಹಾವತಾರವನ್ನು ಮಾಡಿ ಭೂಮಿಯನ್ನು ಧರಿಸಿದವನು. (ಮಹಾಭಾಗಃ) ಸ್ವೇಚ್ಛೆಯಿಂದ ಶ್ಲಾಘ್ಯವಾದ ಶರೀರಗಳನ್ನುಧರಿಸಿ ಮಹಾಭೋಗಭಾಗ್ಯಗಳನ್ನು ಅನುಭವಿಸುವವನು. (ವೇಗವಾನ್) ಸರ್ವಾತಿಶಯವಾದ ವೇಗಶಕ್ತಿಯನ್ನು ಪಡೆದಿರುವವನು. (ಅಮಿತಾಶನಃ) ಸಂಹಾರಸಮಯದಲ್ಲಿ ಪ್ರಪಂಚವನ್ನೆಲ್ಲ ಭುಜಿಸುವವನು. (ಉದ್ಭವಃ) ಪ್ರಪಂಚೋತ್ಪತ್ತಿಗೆ ಮೂಲಕಾರಣನಾಗಿರುವ, ವಾ, ಸಂಸಾರಬಂಧವೇ ಇಲ್ಲದೆ ದೂರವಾಗಿರುವ

ಉದ್ಭವಃ ಕ್ಷೋಭಣೋದೇವ ಶ್ರೀಗರ್ಭಃ ಪರಮೇಶ್ವರಃ ।
ಕರಣಂ, ಕಾರಣಂ ಕರ್ತಾ ವಿಕರ್ತಾ ಗಹನೋಗುಹಃ ॥೪೦॥ [೪೦]
ವ್ಯವಸಾಯೋ ವ್ಯವಸ್ಥಾನ ಸ್ಸಂಸ್ಥಾನ ಸ್ಸ್ಥಾನದೋ ಧ್ರುವಃ, । [೫೦]

---

ವನು. (ಕ್ಷೋಭಣಃ) ಸೃಷ್ಟಿಕಾಲದಲ್ಲಿ ಪ್ರಕೃತಿಪುರುಷರ ಒಳಹೊಕ್ಕು ಪ್ರಪಂಚವ್ಯವಹಾರ ನಿರ್ವಾಹಕರೂಪನಾದವನು (ದೇವಃ) ಸೃಷ್ಟಿಯಿಂದ ಲೀಲೆಯನ್ನು ತೋರುವ, ವಾ, ದೇವಾದಿಗಳನ್ನು ಗೆಲ್ಲುವ, ವಾ, ಎಲ್ಲ ಭೂತಗಳಲ್ಲಿಯೂ ಆತ್ಮಭಾವದಿಂದ ವ್ಯವಹರಿಸುವ, ವಾ, ಬಗೆಬಗೆಯಾಗಿ ಬೆಳಗುವ, ವಾ, ಯೋಗಿಗಳಿಂದ ಧ್ಯಾನಿಸಲ್ಪಡುವ, ವಾ, ಯೋಗ್ಯರಿಂದ ಹೊಗಳಲ್ಪಡುವ, ವಾ, ಸರ್ವತ್ರ ಪ್ರಕಾಶಿಸುವವನು. (ಶ್ರೀಗರ್ಭಃ) ಜಗದ್ರೂಪವಾದ ಸಂಪತ್ತನ್ನೆಲ್ಲ ಉದರದಲ್ಲಿ ಧರಿಸಿರುವವನು. (ಪರಮೇಶ್ವರಃ) ಪಕ್ಷಪಾತವಿಲ್ಲದೆ ಎಲ್ಲರನ್ನೂ ಸರಿಯಾಗಿ ಶಾಸನಮಾಡುತ್ತಿರುವ, ಅಥವಾ, ಸರ್ವಭೂತಗಳಲ್ಲಿಯೂ ಸಮನಾಗಿ ನೆಲೆಗೊಂಡಿರುವವನು. (ಕರಣಂ) ಜಗದುತ್ಪತ್ತಿಯಲ್ಲಿ ಮುಖ್ಯಕಾರಣವೆನಿಸಿದವನು. (೪೦)

(ಕಾರಣಂ) ವೃಜೋತ್ಪತ್ತಿಯಲ್ಲಿ ಸಾಧಾರಣ ಕಾರಣವೂ ಆಗಿರುವವನು. (ಕರ್ತಾ) ಕರಣ ಕಾರಣಗಳಲ್ಲದೆ ಪ್ರಪಂಚಕ್ಕೆ ಸ್ವತಂತ್ರ ಕರ್ತೃವೂ ಆಗಿರುವವನು. (ವಿಕರ್ತಾ) ವಿಚಿತ್ರಭುವನಕರ್ತೃವೆನಿಸಿದವನು. (ಗಹನಃ) ತಿಳಿಯಲಸಾಧ್ಯವೆನಿಸಿದ ಸ್ವರೂಪವೂ, ವ್ಯಾಪಾರವೂ, ಸಾಮರ್ಥ್ಯವೂ ಉಳ್ಳವನು. (ಗುಹಃ) ಮಾಯೆಯಿಂದ ಸ್ವರೂಪಾದಿಗಳನ್ನು ಮರೆಮಾಡಿಕೊಂಡಿರುವವನು, ವಾ, ಗುಹೆಯಂತೆ ಭಕ್ತರನ್ನು ಕಾಯುವವನು. (ವ್ಯವಸಾಯಃ) ಸಚ್ಚಿದಾನಂದ ಮಾತ್ರಸ್ವರೂಪವಾಗಿ ನೆಲೆಗೊಂಡಿರುವವನು, ವಾ, ಎಲ್ಲ ವ್ಯವಸ್ಥೆಗೂ ಕಾರಣನು. (ವ್ಯವಸ್ಥಾನಃ) ಮೇರೆ ಮೀರದಂತೆ ಎಲ್ಲವನ್ನೂ ಸ್ವಾತ್ಮದಲ್ಲಿ ನೆಲೆಗೊಳಿಸಿಕೊಂಡಿರುವ, ವಾ, ಲೋಕಪಾಲಾದ್ಯಧಿಕಾರಗಳನ್ನೂ, ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ ಈಮುಂತಾದ ಪ್ರಾಣಿಗಳನ್ನೂ, ಬ್ರಹ್ಮ, ಕ್ಷತ್ರ, ವೈಶ್ಯ ಶೂದ್ರ ಮೊದಲಾದ ವರ್ಣಭೇದಗಳನ್ನೂ, ಬ್ರಹ್ಮಚರ್ಯ ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸರೂಪ ಆಶ್ರಮಗಳನ್ನೂ, ಪರಸ್ಪರ ಸಾಂಕರ್ಯವಿಲ್ಲ

ಪರರ್ದ್ಧಿಃ ಪರಮಸ್ಪಷ್ಟಸ್ತುಷ್ಟಃ ಪುಷ್ಟಃ ಶುಭೇಕ್ಷಣಃ ||೪೨||
ರಾಮೋ ವಿರಾಮೋ ವಿರಜೋ ಮಾರ್ಗೋ ನೇಯೋ ನಯೋ, ನಯಃ |

---

ದಂತೆ ವಿಭಾಗವ್ಯವಸ್ಥೆ ಮಾಡುವವನು. (ಸಂಸ್ಥಾನಃ) ಪ್ರಳಯಕಾಲದಲ್ಲಿ ಸ್ವಾತ್ಮದಲ್ಲಿ ಸಮಸ್ತಭೂತಗಳನ್ನೂ ಇಂಬಿಡುವವನು. (ಸ್ಥಾನದಃ) ಧ್ರುವನೇ ಮೊದಲಾದವರಿಗೆ ಅವರವರ ಕರ್ಮಾನುಗುಣವಾದ ಸ್ಥಾನವನ್ನು ಅನುಗ್ರಹಿಸುವವನು (ಧ್ರುವಃ) ಎಂದಿಗೂ ವಿನಾಶವನ್ನು ಪಡೆಯದಿರುವ ಸ್ಥಿತಿಯುಳ್ಳವನು. (೯೮)

(ಪರರ್ದ್ಧಿಃ) ಅಪಾರವೆನಿಸಿದ ಅಭಿವೃದ್ಧಿಯುಳ್ಳವನು, ವಾ, ಸರ್ವಸಂಜೀವನವೆನಿಸಿದವನು. (ಪರಮಸ್ಪಷ್ಟಃ) ಸರ್ವೋತ್ಕೃಷ್ಟವೆನಿಸಿದ ಶೋಭಾಸಂಪನ್ನನಾದವನು, ವಾ, ಆನಂದಾದಿ ಗುಣಗಳಿಂದ ವ್ಯಕ್ತನಾಗಿರುವವನು. (ತುಷ್ಟಃ) ಪರಾಧೀನವಲ್ಲದ ಸ್ಥಿತಿಯನ್ನು ಸ್ಪಷ್ಟಗೊಳಿಸುತ್ತಿರುವವನು. (ಪುಷ್ಟಃ) ಪರಮಾನಂದಸ್ವರೂಪನೇ ಆಗಿರುವುದರಿಂದ ನಿತ್ಯತೃಪ್ತನಾದವನು. (ಶುಭೇಕ್ಷಣಃ) ಮುಮುಕ್ಷುಗಳಿಗೆಲ್ಲ ಮುಕ್ತಿಯನ್ನೀವ, ವಾ, ಭೋಗಾಭಿಲಾಷಿಗಳಿಗೆ ಭೋಗವನ್ನು ಕೊಡುವ, ವಾ, ಭಕ್ತರ ಸರ್ವಪಾಪಕರ್ಮಗಳನ್ನೂ ಪರಿಹರಿಸುವ, ವಾ, ಜ್ಞಾನಿಗಳಿಗೆ ಅಜ್ಞಾನನಿವೃತ್ತಿಪೂರ್ವಕವಾಗಿ ಹೃದಯದ ಗ್ರಂಥಿಯನ್ನು ಭೇದಿಸುವಂತೆ ಮಾಡುವ ಶುಭಸಂದರ್ಶನವುಳ್ಳವನು. (ರಾಮಃ) ಯೋಗಿಗಳ ಮನೋವಿಹಾರಕ್ಕೆ ಸ್ಥಾನವೆನಿಸಿದ ನಿತ್ಯಾನಂದಲಕ್ಷಣ ಚಿದಾತ್ಮನಾಗಿರುವ, ವಾ, ಸ್ವೇಚ್ಛೆಯಿಂದ ರಮಣೀಯವಾದ ಶರೀರವನ್ನಾಂತು ದಶರಥಪುತ್ರನಾಗಿ ಬೆಳಗಿದ, ವಾ, ಸಹಸ್ರನಾಮಸಾರ ಸ್ಥಾನವೆನಿಸಿದ, ವಾ, ದೇಹಾವಸಾನದಲ್ಲಿ ಶ್ರೋತ್ರಾಮೃತವಾಗಿರುವವನು. (ವಿರಾಮಃ) ಸರ್ವಪ್ರಾಣಿಗಳಿಗೂ ವಿಶ್ರಾಂತಿಸ್ಥಾನವಾಗಿರುವವನು. (ವಿರಜೋಮಾರ್ಗಃ) ಭರದ್ವಾಜಮುನಿಗಳಿಂದ ಹುಡುಕಲ್ಪಟ್ಟ ಮುಕ್ತಿಸಾಧಕ ಮಾರ್ಗವಾಗಿರುವ, ವಾ, ನಿರ್ದೋಷವಾದ ಮಾರ್ಗವನ್ನು ತಿಳಿಸುವವನು, (ವಿರತಃ ಮಾರ್ಗಃ ಎಂದು ಪಾಠಾಂತರ) ಕಟ್ಟಕಡೆಯ ಪ್ರಾಪ್ಯಸ್ಥಾನವಾಗಿರುವನು. ವಿರತೇ-ರಜೋಗುಣದ ಸಂಬಂಧಲೇಶವಿಲ್ಲದಪರಮಪುರುಷನು ಎನಿಸಿದವನು. ಮಾರ್ಗಃ-ಮುಮುಕ್ಷುಗಳಿಗೆ ಮುಕ್ತಿಪ್ರಾಪ್ತಿಗಾಗಿ ಮುಖ್ಯಮಾರ್ಗವೆನಿಸಿರುವ

ವೀರ ಶ್ಶಕ್ತಿಮತಾಂ ಶ್ರೇಷ್ಠೋ ಧರ್ಮೋ ಧರ್ಮವಿದುತ್ತಮಃ ॥೪೩॥
ವೈಕುಂಠಃ ಪುರುಷಃ ಪ್ರಾಣಃ ಪ್ರಾಣದಃ ಪ್ರಣವಃ, ಪೃಥುಃ । [೧೦]

ವನು. (ನೇಯಃ) ಸ್ವರೂಪಜ್ಞಾನದಿಂದ ಜೀವನನ್ನು ಸ್ವಾತ್ಮಪ್ರಾಪ್ತಿಗಾಗಿ ಅಣಿಮಾಡುವವನು. (ನಯಃ) ಜೀವನನ್ನು ವ್ಯವಹಾರದೆಸೆಯೊಳಗೆ ಸನ್ಮಾರ್ಗದಲ್ಲಿ ನಡೆಸುವವನು. (೪೦೦)

(ಅನಯಃ) ಬೇರೊಬ್ಬ ನಿಯಾಮಕನನ್ನು ಪಡೆಯದೆ ಇರುವವನು, ವಾ, ದುಷ್ಟರಿಗೆ ವಿರೋಧಿಯಾಗಿ ಕಾಣಿಸುವವನು. (ವೀರಃ) ವಿಕ್ರಮಶಾಲಿಯಾಗಿರುವ, ವಾ, ಯೋಗ್ಯರನ್ನು ವಿಶೇಷವಾಗಿ ಸನ್ಮಾರ್ಗದಲ್ಲಿ ಪ್ರವೃತ್ತಿಗೊಳಿಸುವವನು, ವಾ, ದುಷ್ಟರಿಗೆ ಭಯಂಕರನು. (ಶಕ್ತಿಮತಾಂ ಶ್ರೇಷ್ಠಃ) ಶಕ್ತಿವಂತರಾದ ವಿರಿಂಚಿಯೇ ಮೊದಲಾದವರೆಲ್ಲರಿಗಿಂತಲೂ ಶಕ್ತಿವಂತನಾದವನು. (ಧರ್ಮಃ) ಸರ್ವಭೂತಗಳನ್ನೂ ಧರಿಸಿರುವ, ವಾ, ಧರ್ಮಗಳಿಂದ ಆರಾಧಿಸಲ್ಪಡುವವನು, ವಾ, ಪುರುಷಾರ್ಥಸಾಧಕನು. (ಧರ್ಮವಿದುತ್ತಮಃ) ಸ್ವಾಜ್ಞಾರೂಪನಾಗಿರುವ ಶ್ರುತಿಸ್ಮೃತಿಗಳನ್ನೆಲ್ಲ ಬಲ್ಲ ಧರ್ಮವಿದರಿಗಿಂತಲೂ ಉತ್ತಮನೆನಿಸಿದವನು. (ವೈಕುಂಠಃ) ದುರ್ಮಾರ್ಗಪ್ರವೃತ್ತರಾದವರ ದುರಭಿಪ್ರಾಯಗಳಿಗೆ ಭಂಗವನ್ನುಂಟುಮಾಡುವ, ವಾ, ಪ್ರಳಯದಲ್ಲಿ ಭೂತಗಳೆಲ್ಲವೂ ಅಗಲಿಹೋಗಿರಲು, ಮರಳಿ ಸೃಷ್ಟಿಸಮಯಬಂದಾಗ ಭೂಮಿಯನ್ನು ಜಲದೊಡನೆಯೂ, ಆಕಾಶವನ್ನು ವಾಯುವಿನೊಡನೆಯೂ, ವಾಯುವನ್ನು ತೇಜಸ್ಸಿನೊಡನೆಯೂ ಸೇರಿಸತಕ್ಕವನು. (ಪುರುಷಃ) ಸಕಲಪಾಪಗಳಿಗಿಂತಲೂ ದೂರದಲ್ಲಿರುವ, ವಾ, ಹೃದಯಗಳೆಂಬ ಪುರಗಳಲ್ಲಿ ಬೆಳಗುತ್ತಿರುವವನು. (ಪ್ರಾಣಃ) ಕ್ಷೇತ್ರಜ್ಞರೂಪದಿಂದ ಎಂದರೆ ಜೀವರೂಪದಿಂದ ಇರುವ, ವಾ, ಜೀವನನ್ನು ಪ್ರಾಣವಾಯುರೂಪದಿಂದ ಬದುಕಿ ಇರುವಂತೆ ಮಾಡಿ ವ್ಯವಹಾರವನ್ನು ನೆರವೇರಿಸುತ್ತಿರುವವನು, ವಾ, ಸರ್ವಜೀವ ಬಲಸ್ವರೂಪನಾದವನು. (ಪ್ರಾಣದಃ) ಪ್ರಳಯಕಾಲದಲ್ಲಿ ಪ್ರಾಣಿಗಳ ಪ್ರಾಣಗಳನ್ನೆಲ್ಲ ಖಂಡಿಸುವ, ಅಥವಾ ಸೃಷ್ಟಿಯ ಆದಿಭಾಗದಲ್ಲಿ ಅಂತರ್ಯಾಮಿಯಾಗಿ ಇದ್ದುಕೊಂಡು ಸಮಸ್ತಪ್ರಾಣಿಗಳಿಗೂ ಪ್ರಾಣವನ್ನು ಕೊಡುವವನು. (ಪ್ರಣವಃ) ಸಮಸ್ತಸತ್ಕರ್ಮಗಳಲ್ಲಿಯೂ ಸ್ತುತಿಸಲ್ಪಡುವ, ವಾ, ಸರ್ವರಿಂದಲೂ ಪ್ರಣಮಿಸಲ್ಪಡುವ ಎಂದರೆ ನಮಸ್ಕರಿಸಲ್ಪಡುವವನು. (೧೦)

ಹಿರಣ್ಯಗರ್ಭ ಶ್ಶತ್ರುಘ್ನೋ ವ್ಯಾಪ್ತೋವಾಯು ರಧೋಕ್ಷಜಃ ||೪೪||
ಋತು ಸ್ಸುದರ್ಶನಃ ಕಾಲಃ ಪರಮೇಷ್ಠೀ, ಪರಿಗ್ರಹಃ |, [೨೦]
ಉಗ್ರ ಸ್ಸಂವತ್ಸರೋ ದಕ್ಷೋ ವಿಶ್ರಾಮೋ ವಿಶ್ವದಕ್ಷಿಣಃ ||೪೫||

---

(ಪೃಥು) ಪ್ರಪಂಚರೂಪವೆಂದು, ವಾ, ಕೀರ್ತಿಯಿಂದ ವಿಸ್ತಾರವನ್ನು ಪಡೆದಿರುವವನು.(ಹಿರಣ್ಯಗರ್ಭಃ) ಹಿರಣ್ಯಗರ್ಭನ ಎಂದರೆ ಚತುರ್ಮುಖಬ್ರಹ್ಮನ ಉತ್ಪತ್ತಿಗೆ ಕಾರಣವೆನಿಸಿ, ಸುವರ್ಣಮಯವಾಗಿರುವ ಬ್ರಹ್ಮಾಂಡ ರೂಪವಾದ ಮೊಟ್ಟೆಯನ್ನು ಗರ್ಭದಲ್ಲಿ ಧರಿಸಿರುವವನು. (ಶತ್ರುಘ್ನಃ) ದೇವತೆಗಳ ಹಗೆಗಳನ್ನೆಲ್ಲ ಕೊಲ್ಲುವ, ವಾ, ಭಕ್ತರ ಕಾಮಕ್ರೋಧಾದಿ ಶತ್ರುಗಳನ್ನು ಹನನಮಾಡುವವನು. (ವ್ಯಾಪ್ತಃ) ಕಾರಣರೂಪದಿಂದ ಸರ್ವ ಕಾರ್ಯಗಳಲ್ಲಿಯೂ ವ್ಯಾಪಿಸಿರುವವನು. (ವಾಯುಃ) ವಾಯುರೂಪದಿಂದ ಗಂಧವನ್ನು ಹರಡುತ್ತಿರುವ, ವಾ, ಗಂಧರೂಪದಿಂದ ವ್ಯಾಪಿಸುತ್ತಿರುವನು. (ಅಧೋಕ್ಷಜಃ) ಯಾರಿಂದಲೂ ತಿರಸ್ಕರಿಸಲ್ಪಡದೆಯೂ, ಕ್ಷಯಿಸದೆಯೂ ಇರುವ, ವಾ, ಅಕ್ಷಕ್ಕೂ ಎಂದರೆ ದ್ಯುಲೋಕಕ್ಕೂ ಅಧಃ ಎಂದರೆ ಭೂಲೋಕಕ್ಕೂ ಅಂತರಾಳದಲ್ಲಿ ವಿರಾಡ್ರೂಪದಿಂದ ಪ್ರಕಾಶಿಸಿದ, ವಾ, ಇಂದ್ರಿಯವ್ಯಾಪಾರಗಳನ್ನು ತಿರಸ್ಕರಿಸಿರುವವನು. (ಋತುಃ) ಕಾಲಸ್ವರೂಪದಿಂದ ಇದ್ದರೂ, ಋತುರೂಪದಿಂದ ಮಹಿಮೆಯನ್ನು ತೋರುವವನು. (ಸುದರ್ಶನಃ) ಮುಕ್ತಿಫಲವನ್ನು ಅನುಗ್ರಹಿಸುವ ದರ್ಶನವುಳ್ಳ, ವಾ, ಪದ್ಮಪತ್ರದಂತೆ ಅಗಲವಾಗಿಯೂ, ಅಂದವಾಗಿಯೂ ಇರುವ ನೇತ್ರಗಳುಳ್ಳವನು, ವಾ, ಸುಂದರವಾಗಿ ಕಾಣಬರುವ ದೇಹವನ್ನೊಳಗೊಂಡಿರುವ, ವಾ, ಭಕ್ತರಿಗೆ ಸುಲಭವಾಗಿ ದರ್ಶನವನ್ನು ಕೊಡುವವನು. (ಕಾಲಃ) ಪ್ರಪಂಚದಲ್ಲಿನ ಎಲ್ಲದರಸ್ಥಿತಿಗತಿಗಳನ್ನೂ ಗಣನೆ ಮಾಡುವವನು. (ಪರಮೇಷ್ಠೀ) ಸ್ವಮಹಿಮೆಯೆಂಬ ಅತ್ಯುನ್ನತಸ್ಥಾನದಲ್ಲಿ ನೆಲೆಗೊಂಡಿರುವವನು. (೨೦)

(ಪರಿಗ್ರಹಃ) ಮರೆಹೊಗುವ ಭಕ್ತರಿಗೆ ಎಲ್ಲೆಲ್ಲಿಯೂ ದರ್ಶನಕೊಡುವ, ವಾ, ಭಕ್ತರು ಭಕ್ತಿಯಿಂದೊಪ್ಪಿಸುವ ಪತ್ರಪುಷ್ಪಗಳನ್ನಾದರೂ ಆದರದಿಂದ ಪರಿಗ್ರಹಿಸುವವನು. (ಉಗ್ರಃ) ಲೋಕದಲ್ಲಿ ಭಯಂಕರರಾದ ಸೂರ್ಯಾಗ್ನಿ ಮೃತ್ಯುಗಳಿಗೂ ಭಯಂಕರನಾಗಿರುವವನು. (ಸಂವತ್ಸರಃ) ದಿನ, ಪಕ್ಷ, ಮಾಸಾದಿಗಳೂ, ಸಮಸ್ತಭೂತಗಳೂ, ಸಸ್ಯಾದಿ ಸ

ವಿಸ್ತಾರ ಸ್ಥಾವರ ಸ್ಥಾಣುಃ ಪ್ರಮಾಣಂ ಬೀಜ ಮವ್ಯಯಮ್.॥[೩೦]
ಅರ್ಥೋಽನರ್ಥೋ ಮಹಾಕೋಶೋ ಮಹಾಭೋಗೋ ಮಹಾಧನಃ॥ ೪೭

---

ಮಸ್ತಕಾರ್ಯಗಳೂ, ಚೆನ್ನಾಗಿ ನಾಸಮಾಡುವುದಕ್ಕೆ ಆಸರೆಯಾಗಿರುವವನು. (ದಕ್ಷಃ) ಜಗದ್ರೂಪದಿಂದ ಅಭಿವೃದ್ಧಿಯನ್ನು ಹೊಂದುವ, ವಾ, ಸರ್ವಕರ್ಮಗಳನ್ನೂ ಬೇಗನೆ ನೆರವೇರಿಸುವವನು. (ವಿಶ್ರಾಮಃ) ಸಂಸಾರಸಾಗರದಲ್ಲಿ ಬಿದ್ದು, ಹಸಿವು ಬಾಯಾರಿಕೆಗಳೆಂಬ ಅಲೆಗಳ ಪೆಟ್ಟುತಿಂದು, ಬಗೆಬಗೆಯ ಉಪದ್ರವಗಳೆಂಬ ಮಹಾಕ್ಲೇಶಗಳಿಂದಲೂ, ಮದ ಮಾತ್ಸರ್ಯಾದಿ ಉಪಕ್ಲೇಶಗಳಿಂದಲೂ ಬೆಂದು, ನೊಂದು, ಬೇಸತ್ತು, ಬಸವಳಿದು ಅನನ್ಯಶರಣರಾಗಿ ಮರೆಹೊಕ್ಕು, ದೈನ್ಯದಿಂದ ಬೇಡುವ ಭಕ್ತರಿಗೆ ಪರಮಪದವೆಂಬ ವಿಶ್ರಾಂತಿಯನ್ನನುಗ್ರಹಿಸುವವನು. (ವಿಶ್ವದಕ್ಷಿಣಃ) ಪ್ರಪಂಚದಲ್ಲಿರುವವರೆಲ್ಲರಿಗಿಂತಲೂ ಶಕ್ತನಾದ, ಅಥವಾ, ಭಕ್ತರ ಸಮಸ್ತಸತ್ಕರ್ಮಗಳಲ್ಲಿಯೂ ದಾಕ್ಷಿಣ್ಯವನ್ನು ತೋರುವವನು. (ವಿಸ್ತಾರಃ) ಸಮಸ್ತಜಗತ್ತುಗಳಿಗೂ ಉದರದಲ್ಲಿ ವಿಸ್ತೀರ್ಣವಾಗಿ ಸ್ಥಾನವನ್ನು ಇಂಬಿಟ್ಟುಕೊಟ್ಟಿರುವವನು. (ಸ್ಥಾವರಸ್ಥಾಣುಃ) ಪ್ರಪಂಚದ ಸಕಲ ಪದಾರ್ಥಗಳ ಸ್ಥಿತಿಯನ್ನೂ ಕಾಪಾಡುವ ಸ್ವಭಾವವುಳ್ಳ, ವಾ, ಎಂದಿಗೂ ಚಲಿಸದೆ ಸ್ಥಿರವಾಗಿ ನೆಲೆಗೊಂಡಿರುವವನು. (ಪ್ರಮಾಣಂ) ಪ್ರತ್ಯಕ್ಷಾದಿ ಪ್ರಮಾಣರೂಪನಾಗಿರುವ, ವಾ, ಜ್ಞಾನರೂಪನಾಗಿರುವುದರಿಂದ ಸ್ವತಃ ಪ್ರಮಾಣರೂಪನಾಗಿರುವವನು. (ಬೀಜಮವ್ಯಯಂ) ರೂಪಾಂತರವನ್ನು ಪಡೆಯದೆಯೇ ಪ್ರಪಂಚಕ್ಕೆ ಮೂಲಕಾರಣವೆನಿಸಿರುವವನು. (೩೦)

(ಅರ್ಥಃ) ಸುಖಸ್ವರೂಪನಾಗಿರುವುದರಿಂದ ಸರ್ವರಿಂದಲೂ ಪ್ರಾರ್ಥಿಸಲ್ಪಡುವ, ವಾ, ಎಲ್ಲರಿಂದಲೂ ಬೇಡಲ್ಪಡುವ ದ್ರವ್ಯಸಾರವಾಗಿರುವವನು. (ಅನರ್ಥಃ) ಸಮಸ್ತಕಾಮಗಳಿಂದಲೂ ಪರಿಪೂರ್ಣನಾಗಿ, ಭಕ್ತರ ಕಾಮಗಳನ್ನು ನೀಡತಕ್ಕವನೆನಿಸಿರುವುದರಿಂದಲೇ ಪಡೆಯಬೇಕಾದ ಬೇರೊಂದು ಪ್ರಯೋಜನವಿಲ್ಲದವನು. (ಮಹಾಕೋಶಃ) ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಕೋಶಗಳಿಂದ ಮರೆ ಮಾಡಿಕೊಂಡಿರುವ ಸ್ವರೂಪವುಳ್ಳ, ವಾ, ಕ್ಷಯಿಸದಿರುವ ನಿಧಿಸ್ವರೂಪನು. (ಮಹಾಭೋಗಃ) ಸರ್ವೋತ್ತಮವೆನಿಸಿದ ಸುಖಸ್ವರೂಪವನ್ನೊಳಗೊಂಡಿರುವವನು. (ಮಹಾಧನಃ) ಮರೆಹೊಕ್ಕ ಭಕ್ತರ ಸುಖಾನುಭವಕ್ಕೆಲ್ಲ ಅನುಕೂ

ಅನಿರ್ವಿಣ್ಣಃ ಸ್ಥವಿಷ್ಠೋಽಭೂರ್ಧರ್ಮಯೂಪೋ ಮಹಾಮಖಃ । [೪೮]
ನಕ್ಷತ್ರನೇಮಿರ್ನಕ್ಷತ್ರೀ ಕ್ಷಮಃ ಕ್ಷಾಮಃ ಸಮೀಹನಃ ॥ (೪೨)

---

ಲಿಸುವಷ್ಟು ಸುಖದ ಸಲಕರಣೆಗಳನ್ನೊಳಗೊಂಡಿರುವ, ವಾ, ಅವತಾರವಿಶೇಷದಲ್ಲಿ ಗೋಧನಸ್ವಾಮಿಯಾದವನು. (ಅನಿರ್ವಿಣ್ಣಃ) ಸರ್ವಕಾಮಗಳನ್ನೂ ಪಡೆದಿರುವುದರಿಂದಲೇ ಬೇರೊಂದು ಕಾಮದ ಕ್ಲೇಶವಿಲ್ಲದಿರುವವನು. (ಸ್ಥವಿಷ್ಠಃ) ಅಗ್ನಿಯೇ ಶಿರಸ್ಸು, ಸೂರ್ಯಚಂದ್ರರು ನೇತ್ರಗಳು ದಿಕ್ಕುಗಳೇ ಕಿವಿಗಳು, ವಾಕ್ಕೇ ವೇದಗಳು, ಪೃಥಿವಿಯೇ ಪಾದ, ಭೂತಗಳೇ ಶರೀರ. ಈ ಪ್ರಕಾರ ವಿರಾಡ್ರೂಪದಿಂದ ನೆಲೆಗೊಂಡಿರುವವನು. (ಅಭೂಃ) ಜನ್ಮವನ್ನು ಪಡೆಯದಿರುವ, ವಾ, ಭೂಮಿಯರೂಪದಿಂದಿರುವ ಇಲ್ಲವೆ ಎಲ್ಲಕ್ಕೂ ಮನೆಯಾಗಿರುವವನು. (ಧರ್ಮಯೂಪಃ) ಯಜ್ಞದಲ್ಲಿ ಪಶುಬಂಧಕ್ಕೆ ಯೂಪವು ಹೇಗೋ ಹಾಗೆ ಸಮಸ್ತಧರ್ಮಗಳ ಬಂಧಕ್ಕೂ ಆಧಾರಸ್ತಂಭವೆನಿಸಿರುವವನು. (ಮಹಾಮಖಃ) ಯಜ್ಞಗಳನ್ನು ಭಕ್ತಿಯಿಂದ ಅರ್ಪಿಸಿದರೆ- ಉಚಿತಫಲಗಳನಿತ್ತು ಆ ಯಜ್ಞಗಳನ್ನು ಸಾರ್ಥಕಗೊಳಿಸುವವನು. (೪೦)

(ನಕ್ಷತ್ರನೇಮಿಃ) ಅಶ್ವಿನ್ಯಾದಿ ನಕ್ಷತ್ರಗಳು, ಇತರ ತಾರೆಗಳು, ಸೂರ್ಯಚಂದ್ರಾದಿ ಗ್ರಹಗಳೂ ಸಹ ವಾಯುಮಯವಾದ ಪಾಶಗಳಿಂದ ಬದ್ಧಗಳಾಗಿ ನೆಲೆಗೊಂಡಿರುವ ಜ್ಯೋತಿಶ್ಚಕ್ರದ ಮಧ್ಯದಲ್ಲಿನ ಧ್ರುವಮಂಡಲವೆಂಬ ಶಿಂಶುಮಾರ ಚಕ್ರವನ್ನೂ ತಿರುಗಿಸುವ ಚಕ್ರಾಧಿಕಾರಿಯಾಗಿರುವವನು. (ನಕ್ಷತ್ರೀ) ನಕ್ಷತ್ರಗಳೊಳಗೆ ಮಹಾನಕ್ಷತ್ರವಾದ ಚಂದ್ರರೂಪದಿಂದ ಬೆಳಗುವವನು. (ಕ್ಷಮಃ) ಸರ್ವಕಾರ್ಯಗಳಲ್ಲಿಯೂ ಸಮರ್ಥನಾಗಿರುವ, ವಾ, ಭೂಮಿಯಂತೆ ಕ್ಷಮಾಗುಣದಿಂದ ಕೂಡಿರುವವನು. (ಕ್ಷಾಮಃ) ಸರ್ವವಿಕಾರಗಳೂ ಕ್ಷಯವನ್ನು ಹೊಂದಿದರೂ ಸ್ವಸ್ವರೂಪದಿಂದ ಅಕ್ಷಯವಾಗಿರುವವನು. (ಸಮೀಹನಃ) ಸೃಷ್ಟಿಯೇ ಮೊದಲಾದ ಕಾರ್ಯಗಳನ್ನು ಮಾಡಲಿಕ್ಕಾಗಿ ಚೆನ್ನಾಗಿ ಸಂಕಲ್ಪಿಸುವವನು. (ಯಜ್ಞಃ) ಯಜ್ಞರೂಪಕಾರಣದಿಂದ ದೇವತೆಗಳ ಆಹಾರವೇ ಮೊದಲಾದ ಕಾರ್ಯಗಳನ್ನೆಲ್ಲ ನಿರ್ವಹಿಸುವವನು. (ಇಜ್ಯಃ) ಸಕಲದೇವತಾಸ್ವರೂಪನಾಗಿ ಸಕಲ ಯಜ್ಞಗಳಲ್ಲಿಯೂ ಪೂಜಿಸಲ್ಪಡುವವನು. (ಮಹೇಜ್ಯಃ) ಯಜ್ಞಗ

ಯಜ್ಞ ಇಜ್ಯೋ ಮಹೇಜ್ಯಶ್ಚ ಕ್ರತು ಸ್ಸತ್ರಂ, ಸತಾಂ ಗತಿಃ । [೫೦]
ಸರ್ವದರ್ಶೀ ನಿವೃತ್ತಾತ್ಮಾ ಸರ್ವಜ್ಞೋ ಜ್ಞಾನ ಮುತ್ತಮಮ್ ॥ (೪೯)
ಸುವ್ರತ ಸ್ಸುಮುಖ ಸ್ಸೂಕ್ಷ್ಮ ಸ್ಸುಘೋಷ ಸ್ಸುಖದ, ಸ್ಸುಹೃತ್ । [೬೦]

---

ಳಲ್ಲಿ ಇತರ ದೇವತೆಗಳೆಲ್ಲ ಪೂಜಾರ್ಹರಾಗಿದ್ದಾಗ್ಯೂ ಮೋಕ್ಷಫಲದಾತೃ ವಾಗಿರುವುದರಿಂದ ಮುಖ್ಯಪೂಜ್ಯನಾಗಿರುವವನು. (ಕ್ರತುಃ) ಯೂಪ ಸಹಿತವಾದ ಯಜ್ಞಸ್ವರೂಪನಾಗಿರುವ, ವಾ, ಸತ್ಸಂಕಲ್ಪರೂಪವಾಗಿರುವ ವನು, ವಾ, ಪಾಕಯಜ್ಞ, ಅಗ್ನಿಹೋತ್ರ, ಮಹಾಯಜ್ಞಾದಿಗಳಿಂದ ಪೂಜಿಸಲ್ಪಡುವವನು, ವಾ, ಸಂಕಲ್ಪಸ್ವರೂಪನು. (ಸತ್ರಮ್) ದೀರ್ಘ ಕಾಲದವರೆಗೆ ವಿಚಾರಪರತೆಯಿಂದಕೂಡುವ ಸತ್ರರೂಪನಾದ, ವಾ, ಸುಜ ನರನ್ನು ಕಾಪಾಡುವವನು. (೫೦)

(ಸತಾಂಗತಿಃ) ಸತ್ಪುರುಷರಿಗೆಲ್ಲ ಶರಣ್ಯನಾದ ಎಂದರೆ ಮುಖ್ಯಾಶ್ರ ಯನಾಗಿರುವವನು, ವಾ, ಪ್ರವೃತ್ತಿಧರ್ಮಫಲದಾತನು. (ಸರ್ವದರ್ಶೀ) ಪ್ರಾಣಿಗಳೆಲ್ಲ ಮಾಡಿದ್ದನ್ನೂ, ಮಾಡಬೇಕಿರುವುದನ್ನೂ, ಸ್ವಾಭಾವಿಕವಾದ ಜ್ಞಾನದಿಂದ ತಿಳಿಯುವವನು. (ನಿವೃತ್ತಾತ್ಮಾ) ಸ್ವಭಾವದಿಂದಲೇ ಮುಕ್ತಾತ್ಮಸ್ವರೂಪನಾಗಿರುವವನು. (ಸರ್ವಜ್ಞಃ) ಸರ್ವಸ್ವರೂಪನಾಗಿ ಯೂ, ಸರ್ವವನ್ನೂ ತಿಳಿಯತಕ್ಕವನಾಗಿಯೂ ಇರುವವನು. (ಜ್ಞಾನ ಮುತ್ತಮಂ) ಯಾವಪ್ರಮಾಣ ಪ್ರಮೇಯದಿಂದಲೂ ಉಂಟಾಗದೆಯೂ, ತಡೆಯಿಲ್ಲದೆಯೂ, ಸರ್ವಸಾಧಕವಾಗಿಯೂ ಇರುವ ಅಖಂಡಜ್ಞಾನಸ್ವರೂ ಪನಾಗಿ ಇರುವವನು. (ಸುವ್ರತಃ) ಮಂಗಳಕರವಾದ ವ್ರತವುಳ್ಳವನು, ಎಂದರೆ “ ನಾನು ನಿನ್ನವನು, ನಿನ್ನನ್ನೇ ಮರೆಹೊಕ್ಕಿದೇನೆ, ಎಂಬದಾಗಿ ಒಂದೇಸಾರಿ ಯಾರು ರಕ್ಷಣವನ್ನು ಯಾಚಿಸುತ್ತಾರೆಯೋ ಅಂತಹ ಪ್ರಾ ಣಿಗಳಿಗೆಲ್ಲ ಅಭಯದಾನ ಮಾಡುವುದೇ ನನ್ನವ್ರತ” ಎಂಬದಾಗಿ ರಾಮಾವ ತಾರದಲ್ಲಿ ಅಪ್ಪಣೆಕೊಟ್ಟಿರವವನು (ಸುಮುಖಃ) ಮಂಗಳಕರವಾದ ಮುಖ ವುಳ್ಳ ಎಂದರೆ ಪ್ರಸನ್ನವದನನಾದ ಎಂದರೆ “ ನಾಳೆ ಬೆಳಗಾಗುತಲೆ ಪುಷ್ಯ ನಕ್ಷತ್ರದಲ್ಲಿ ನಿನಗೆ ಪಟ್ಟಕಟ್ಟುತ್ತೇನೆ” ಎಂಬ ತಂದೆಯ ವಚನಕ್ಕಿಂತಲೂ, “ನೀನು ಕಾಡಿಗೆಹೊರಡು” ಎಂಬದಾಗಿ ಹೇಳಿದ ವಚನವನ್ನು ಅತ್ಯಂತ ಪ್ರಿ ಯವಚನವನ್ನಾಗಿ ಆದರಿಸಿ ಕೇಳಿ “ರಾಜ್ಯವನ್ನು ಬಿಟ್ಟು ಕಾಡಿನಲ್ಲಿ ಹದಿನಾ

ಮನೋಹರೋ ಜಿತಕ್ರೋಧೋ ವೀರಬಾಹು ರ್ವಿದಾರಣಃ ॥ (೪೯)
ಸ್ವಾಪನಃ ಸ್ವವಶೋ ವ್ಯಾಪೀ ನೈಕಾತ್ಮಾ ನೈಕಕರ್ಮಕೃತ್, [೭೦]
ವತ್ಸರೋ ವತ್ಸಲೋ ವತ್ಸೀ ರತ್ನ ಗರ್ಭೋ ಧನೇಶ್ವರಃ॥ (೫೦)

---

ಲ್ಲವರುಷಗಳು ಸಂತೋಷವಾಗಿ ವಾಸಮಾಡುತ್ತೇನೆ," ಎಂದು, ಮೊದಲು ಮನಸ್ಸಿನಿಂದ ರಾಜ್ಯವನ್ನು ಪರಿಗ್ರಹಿಸಿದಾಗಲೂ, ಬಳಿಕ ವಾಕ್ಕಿನಿಂದ ಮನಃಪೂರ್ವಕವಾಗಿ ತೊರೆದಾಗಲೂ, ವಿರಕ್ತನಂತೆ ವ್ಯಥೆಪಡದೆ ಪ್ರಸನ್ನವಾದ ಮುಖವನ್ನುಳ್ಳವನು, ವಾ, ಸೃಷ್ಟ್ಯಾದಿಯಲ್ಲಿ ಚತುರ್ಮುಖನನ್ನುಂಟುಮಾಡಿ, ಆತನಿಗೆ ಸಮಸ್ತವೇದಗಳನ್ನೂ ಉಪದೇಶಿಸಿದ ಮಂಗಳ ಮುಖವುಳ್ಳವನು. (ಸೂಕ್ಷ್ಮಃ) ಸಕಲ ಸೂಕ್ಷ್ಮಪದಾರ್ಥಕ್ಕಿಂತಲೂ ಸೂಕ್ಷ್ಮವೆನಿಸಿದ ಎಂದರೆ ಬಲುನವುರಾದ ಅಥವಾ ಸ್ಥೂಲಪದಾರ್ಥಗಳಿಗೆ ಕಾರಣವಾದ ಸೂಕ್ಷ್ಮಕಾರಣಕ್ಕಿಂತಲೂ ಸೂಕ್ಷ್ಮಕಾರಣನಾದವನು, (ಸುಘೋಷಃ) ವೇದಶಬ್ದಸ್ವರೂಪವಾಗಿರುವ, ಅಥವಾ, ಮೇಘದಂತೆ ಗಂಭೀರವಾದ ಘೋಷವುಳ್ಳವನು. (ಸುಖದಃ) ಒಳ್ಳೆಯ ನಡತೆಯುಳ್ಳವರಿಗೆ ಸುಖವನ್ನು ಕೊಡುವ, ದುರ್ನಡತೆಯುಳ್ಳವರ ಸುಖವನ್ನು ಖಂಡಿಸುವವನು.(೬೦)

(ಸುಹೃತ್) ಪ್ರತ್ಯುಪಕಾರಾಪೇಕ್ಷೆಯಿಲ್ಲದೆಯೇ ಉಪಕರಿಸುವ ಒಳ್ಳೆಯ ಹೃದಯವುಳ್ಳವನು. (ಮನೋಹರಃ) ನಿರತಿಶಯಾನಂದರೂಪನಾಗಿ ಸರ್ವರ ಮನಸ್ಸನ್ನೂ ಅಪಹರಿಸುವವನು. (ಜಿತಕ್ರೋಧಃ) ವಿಕಾರಹೇತುವಾದ ಕ್ರೋಧವನ್ನು ಜಯಿಸಿರುವನು ಎಂದರೆ ಕ್ರೋಧರಹಿತನಾದವನು. (ವೀರಬಾಹುಃ)ವೇದಮರ್ಯಾದೆಯನ್ನು ನೆಲೆಗೊಳಿಸಲಿಕ್ಕಾಗಿಯೇ ಅಸುರರನ್ನು ಕೊಲ್ಲುವ ತೋಳುಬಲವುಳ್ಳವನು. (ವಿದಾರಣಃ) ಅಧಾರ್ಮಿಕರನ್ನೆಲ್ಲ ಸೀಳಿಬಿಡುವವನು. (ಸ್ವಾಪನಃ) ಅಯೋಗ್ಯರನ್ನೆಲ್ಲ ಮಾಯೆಯೆಂಬ ನಿದ್ರೆಯಲ್ಲಿ ಮಲಗಿಸುವ ಎಂದರೆ ಅಜ್ಞಾನಪರವಶರನ್ನಾಗಿ ಮಾಡುವವನು. (ಸ್ವವಶಃ) ಜಗದುತ್ಪತ್ತಿ, ಸ್ಥಿತಿ, ಲಯ ಕಾರ್ಯಗಳಲ್ಲಿ ಸ್ವತಂತ್ರನಾಗಿರುವವನು. (ವ್ಯಾಪೀ) ಆಕಾಶದಂತೆ ಸರ್ವವ್ಯಾಪಿಯಾಗಿರುವ, ವಾ, ಎಲ್ಲಕ್ಕೂ ಕಾರಣವಾಗಿರುವುದರಿಂದ ಎಲ್ಲೆಲ್ಲಿಯೂ ವ್ಯಾಪಿಸಿರುವವನು. (ನೈಕಾತ್ಮಾ) ಜಗದುತ್ಪತ್ತ್ಯಾದಿ ಕಾರ್ಯಗಳಲ್ಲಿ ನಿಮಿತ್ತಭೇದದಿಂದ ಬೇರು ಬೇರಾಗಿದ್ದಾಗ್ಯೂ ಪರಮಾರ್ಥದಲ್ಲಿ ಏಕರೂಪನಾಗಿರುವವನು. (ನೈಕಕರ್ಮಕೃತ್) ಜಗದುತ್ಪತ್ತಿ, ಸ್ಥಿತಿ, ಲಯರೂಪವಾಗಿರುವ ನಾನಾ ಕರ್ಮಗಳನ್ನು ಮಾಡುವವನು. (೭೦)

ಧರ್ಮಗುಬ್ಧರ್ಮಕೃದ್ಧರ್ಮೀ ಸದಸತ್,ಕ್ಷರ ಮಕ್ಷರಮ್ । [ ೪೦]
ಅವಿಜ್ಞಾತಾ ಸಹಸ್ರಾಂಶು ರ್ವಿಧಾತಾ ಕೃತಲಕ್ಷಣಃ ॥ (೫೧)

---

(ವತ್ಸರಃ) ಎಲ್ಲರ ವಾಸಕ್ಕೂ ಆಕರನಾಗಿರುವವನು. (ವತ್ಸಲಃ) ಭಕ್ತರಲ್ಲಿ ಪ್ರೀತಿಯನ್ನು ಇಟ್ಟಿರುವ, ವಾ, ಭಕ್ತರನ್ನು ಮಕ್ಕಳಂತೆ ಕಾಪಾಡುವವನು. (ವತ್ಸೀ) ಜಗತ್ತಿಗೇ ಜನಕನಾಗಿರುವುದರಿಂದ ಪ್ರಾಣಿಗಳನ್ನೆಲ್ಲ ಮಕ್ಕಳನ್ನಾಗಿ ಪಡೆದಿರುವ, ವಾ, ಗೋಪಾಲನಾಗಿದ್ದು ಕರುಗಳನ್ನೆಲ್ಲ ಕಾಯ್ದವನು. (ರತ್ನಗರ್ಭಃ) ರತ್ನದಂತಿರುವ ಶ್ರೇಷ್ಠ ವಸ್ತುಗಳನ್ನೆಲ್ಲ ಗರ್ಭದಲ್ಲಿ ಧರಿಸಿ ಸಮುದ್ರಸ್ವರೂಪನಾದವನು. (ಧನೇಶ್ವರಃ) ಸಮಸ್ತಧನಗಳಿಗೂ ಈಶ್ವರನೆನಿಸಿದವನು. (ಧರ್ಮಗುಪ್) ಆಯಾಯ ಸಮಯಗಳಲ್ಲಿ ಅವತರಿಸಿ, ಸರ್ವಧರ್ಮಗಳನ್ನೂ ಕಾಪಾಡುವವನು. (ಧರ್ಮಕೃತ್) ಧರ್ಮಾಧರ್ಮಗಳ ಕಾರ್ಯಕಾರಣಗಳಿಲ್ಲದವನಾದರೂ ಧರ್ಮ ಮರ್ಯಾದೆಯನ್ನು ಕಾಪಾಡಲು ಧರ್ಮವನ್ನೇ ಆಚರಿಸುತ್ತಿರುವವನು. (ಧರ್ಮೀ) ಸಕಲ ಸದ್ಧರ್ಮಗಳಿಗೂ ಆಧಾರನಾಗಿರುವವನು. (ಸತ್) ಸೃಷ್ಟಿಗಿಂತ ಪೂರ್ವದಲ್ಲಿ ಸಜಾತೀಯ, ವಿಜಾತೀಯ, ಸ್ವಗತಭೇದಗಳಿಲ್ಲದೆ ಏಕರೂಪವಾಗಿರುವವನು. (ಅಸತ್) ವ್ಯಕ್ತವಾಗದ ನಾಮರೂಪಗಳನ್ನೊಳಗೊಂಡಿರುವ, ವಾ, ಪರಮಾರ್ಥದಲ್ಲಿ ಅಳಿದುಹೋಗುವ ನಾಮರೂಪಗಳನ್ನೊಳಗೊಂಡು ಅಪರಬ್ರಹ್ಮಸ್ವರೂಪದಿಂದಲೂ ಇರುವವನು. (೪೦)

(ಕ್ಷರಂ) ಕ್ಷರವೆನಿಸುವ ಸರ್ವಭೂತಸ್ವರೂಪನಾಗಿರುವವನು. (ಅಕ್ಷರಂ) ತನ್ನ ಮೇಲೆ ಅನೇಕ ವಿಕಾರಗಳುಂಟಾದರೂ ತಾನು ಮಾತ್ರ ವಿಕಾರವನ್ನು ಪಡೆಯದಿರುವ ಅಡಿಗಲ್ಲಿನಂತಿರುತ್ತಾ ಕೂಟಸ್ಥನೆನಿಸಿದವನು. (ಅವಿಜ್ಞಾತಾ) ಕರ್ತೃತ್ವಭೋಕ್ತೃತ್ವಾದಿ ವಿಕಲ್ಪಗಳೆಲ್ಲ ತನ್ನಲ್ಲಿ ಉಂಟೆಂಬ ಕಲ್ಪನೆಯ ವಾಸನೆಯಿಂದ ಪೆಟ್ಟುಬಿದ್ದು ವಿಜ್ಞಾತನೆಂಬ ಹೆಸರಿನ ಜೀವನಿಗಿಂತ ವಿಲಕ್ಷಣನಾದವನು. (ಸಹಸ್ರಾಂಶುಃ) ಆದಿತ್ಯಾದಿಗಳಲ್ಲೆಲ್ಲ ಹರಡಿರುವ ಸಾವಿರಾರು ಕಿರಣಗಳನ್ನೊಳಗೊಂಡಿರುವವನು. (ವಿಧಾತಾ) ಭೂಮಿಯನ್ನು ಧರಿಸಿರುವ ಶೇಷ, ದಿಗ್ಗಜ ಮುಂತಾದವುಗಳಿಗೂ ಆಧಾರನಾಗಿರುವವನು. (ಕೃತಲಕ್ಷಣಃ) ಚಲಿಸದಿರುವ ಲಕ್ಷಣವನ್ನೊಳಗೊಂಡಿರುವ, ವಾ, ವೇದಶಾಸ್ತ್ರರೂಪವಾದ ಲಕ್ಷಣಶಾಸ್ತ್ರಗಳನ್ನೆಲ್ಲ ಅಣಿಮಾಡಿರುವ, ವಾ, ಶ್ರೀವತ್ಸರೂಪವಾದ ಲಕ್ಷಣವನ್ನು ದೇಹದಲ್ಲಿ

ಗಭಸ್ತಿನೇಮಿ ಸ್ಸತ್ವಸ್ಥ ಸ್ಸಿಂಹೋ ಭೂತಮಹೇಶ್ವರಃ, । [೯೦]
ಆದಿದೇವೋ ಮಹಾದೇವೋ ದೇವೇಶೋ ದೇವಭೃದ್ಗುರುಃ ॥ (೫೦)
ಉತ್ತರೋ ಗೋಪತಿ ರ್ಗೋಪ್ತಾ ಜ್ಞಾನಗಮ್ಯಃ ಪುರಾತನಃ । [೫೦೦]

---

ಧರಿಸಿರುವವನು. (ಗಭಸ್ತಿನೇಮಿಃ) ಆಕಾಶದೊಳಗೆ ಕಿರಣಮಂಡಲದ ನಡುವೆ ಸೂರ್ಯರೂಪದಿಂದ ಕಂಗೊಳಿಸುವವನು. (ಸತ್ವಸ್ಥಃ) ಸ್ವಾತ್ಮ ಪ್ರಕಾಶಕ್ಕೆ ಕಾರಣವಾಗಿ, ಸತ್ವಗುಣಕ್ಕೆ ಆಸರೆಯಾಗಿರುವ, ವಾ, ಎಲ್ಲ ಪ್ರಾಣಿಗಳಲ್ಲಿಯೂ ನೆಲೆಗೊಂಡಿರುವವನು. (ಸಿಂಹಃ) ಸಿಂಹದಂತೆ ವಿಕ್ರಮಶಾಲಿಯಾದ, ವಾ, ನೃಸಿಂಹರೂಪಿಯಾದವನು. (ಭೂತಮಹೇಶ್ವರಃ) ಭೂತಗಳಿಗೆಲ್ಲ ಸ್ವಾಮಿಯೆನಿಸಿದ, ವಾ, ಸತ್ವದಿಂದ ಪರಮಾತ್ಮನೆನಿಸಿದವನು. (೯೦)

(ಆದಿದೇವಃ) ಎಲ್ಲ ದೇವರುಗಳಿಗಿಂತಲೂ ಮೊದಲನೆಯವನಾದವನು. (ಮಹಾದೇವಃ) ಸರ್ವಭೂತಗಳನ್ನೂ ಗ್ರಹಿಸುವ ದೇವನಾದವನು, (ದೇವೇಶಃ) ವಿಕಾರವೆನಿಸಿದ ಸರ್ವಭೂತಗಳನ್ನೂ ಜಯಿಸಿ, ಯೋಗೈಶ್ವರ್ಯವೆನಿಸಿದ ಮಹಾಜ್ಞಾನರೂಪದಿಂದ ಬೆಳಗುವವನು. (ದೇವಭೃತ್) ದೇವತೆಗಳಲ್ಲಿ ಪ್ರಧಾನನೆನಿಸಿದವನು. (ಗುರುಃ) ದೇವತೆಗಳನ್ನೆಲ್ಲ ಪಾಲಿಸುವ ಇಂದ್ರನಿಗೂ ಗುರುವೆನಿಸಿದವನು. (ಉತ್ತರಃ) ಭಕ್ತರನ್ನೆಲ್ಲ ಸಂಸಾರಸಾಗರದಿಂದ ದಾಟಿಸುವವನು, ವಾ, ಸರ್ವೋತ್ತಮನಾದವನು, ವಾ, ದೇವತೆಗಳಿಗೆ ರಾಕ್ಷಸರಿಂದ ಉಂಟಾಗುತ್ತಿದ್ದ ತೊಂದರೆಯನ್ನು ತಪ್ಪಿಸಿ ಕಾಪಾಡಿದವನು. (ಗೋಪತಿಃ) ಗೋಪವೇಷಧರನಾಗಿ ಗೋವುಗಳನ್ನು ಪಾಲಿಸಿದ, ವಾ, ಅಂಶದಿಂದ ಅವತರಿಸಿ ಭೂಮಿಯನ್ನು ಪಾಲಿಸುವವನು. (ಗೋಪ್ತಾ) ಸಕಲ ಜಗತ್ತನ್ನೂ ರಕ್ಷಿಸುವವನು (ಜ್ಞಾನಗಮ್ಯಃ) ಕರ್ಮದಿಂದಲೂ ಜ್ಞಾನಕರ್ಮಗಳಿಂದಲೂ ಅಲ್ಲದೆ ಜ್ಞಾನವೊಂದರಿಂದಲೇ ತಿಳಿಯಬರುವವನು. (ಪುರಾತನಃ) ಕಾಲದ ಅಳತೆಗೆ ಸಿಲುಕದೆ ಹಳಬನಾಗಿರುವವನು. (೫೦೦)

(ಶರೀರಭೂತಭೃತ್) ಶರೀರಾರಂಭಕ್ಕೆ ಮೂಲಕಾರಣವೆನಿಸಿದ ಪ್ರಾಣಗಳಿಗೂ ಆಧಾರನಾಗಿರುವವನು. (ಭೋಕ್ತಾ) ಸರ್ವಪಾಲಕನಾಗಿರುವ, ವಾ, ಪರಮಾನಂದಾನುಭವಿಯು. (ಕಪೀಂದ್ರಃ) ವರಾಹರೂಪ

ಶರೀರಭೃತಭೃದ್ಭೋಕ್ತಾ ಕಪೀಂದ್ರೋ ಭೂರಿದಕ್ಷಿಣಃ ॥ (೫೩)
ಸೋಮಪೋಽಮೃತಪ ಸ್ಸೋಮಃ ಪುರುಜಿ ತ್ಪುರುಸತ್ತಮಃ ।
ವಿನಯೊ, ಜಯ ಸ್ಸತ್ಯಸಂಧೋ ದಾಶಾರ್ಹ ಸ್ಸಾತ್ವತಾಂಪತಿಃ॥(೫೪)೧೦

---

ವನ್ನು ಧರಿಸಿದ ಸ್ವಾಮಿಯಾಗಿರುವ, ವಾ, ವಾನರರಿಗೆಲ್ಲ ಸ್ವಾಮಿಯಾಗಿದ್ದ, ವಾ, ಕಿರಣಗಳ ಮೂಲಕ ನೀರನ್ನು ಹೀರುವ ಸೂರ್ಯಭಗವಂತನರೂಪವಾಗಿರುವವನು. (ಭೂರಿದಕ್ಷಿಣಃ) ಧರ್ಮಮರ್ಯಾದೆಯನ್ನು ತೋರುತ್ತಾ, ಯಜ್ಞವನ್ನು ಮಾಡುವವರು ಕೊಡುವ ಬಹುದ್ರವ್ಯದ ದಕ್ಷಿಣಾರೂಪವಾಗಿರುವವನು. (ಸೋಮಪಃ) ಯಜ್ಞಗಳಲ್ಲಿ ದೇವತಾರೂಪದಿಂದ, ವಾ, ಧರ್ಮಮರ್ಯಾದೆಯನ್ನು ತೋರಲು ಯಜಮಾನರೂಪದಿಂದ ಸೋಮರಸವನ್ನು ಪಾನಮಾಡುವವನು. (ಅಮೃತಪಃ) ಕಡಲನ್ನು ಕಡೆದಾಗ ಹುಟ್ಟಿದ ಅಮೃತವನ್ನು ಅಸುರರಿಂದ ರಕ್ಷಿಸಿ, ಸುರರಿಗೆ ಪಾನಮಾಡಿಸಿದವನು. (ಸೋಮಃ) ಚಂದ್ರರೂಪದಿಂದಿರುತ್ತಾ ಓಷಧಿಗಳಲ್ಲಿ ರಸವನ್ನು ಪೋಷಿಸುವ, ವಾ, ಸಸ್ಯವರ್ಗವನ್ನು ಬೆಳೆಸುವ, ವಾ, ಉಮೆಯಿಂದ ಸಹಿತನಾದ ಪರಮೇಶ್ವರನ ರೂಪನಾಗಿರುವವನು. (ಪುರುಜಿತ್) ಅನೇಕರಾದ ಹಗೆಗಳನ್ನು ಗೆದ್ದಿರುವವನು. (ಪುರುಸತ್ತಮಃ) ಉತ್ತಮರಿಗೆಲ್ಲ ಉತ್ತಮನೆನಿಸಿದವನು. (ವಿನಯಃ) ದುಷ್ಟರನ್ನೆಲ್ಲ ಶಿಕ್ಷಿಸುವವನು. (೧೦)

(ಜಯಃ) ಸಮಸ್ತಭೂತಗಳನ್ನೂ ಜಯಿಸಿರುವವನು. (ಸತ್ಯಸಂಧಃ) ಸತ್ಯಸಂಕಲ್ಪನಾಗಿರುವ, ವಾ, ಸತ್ಯಪ್ರತಿಜ್ಞನಾಗಿರುವವನು. (ದಾಶಾರ್ಹಃ) ಭಕ್ತರು ಭಕ್ತಿಯಿಂದೊಪ್ಪಿಸುವ ಪದಾರ್ಥಗಳ ದಾನವನ್ನೆಲ್ಲ ಸ್ವೀಕರಿಸಲು ಅರ್ಹನಾದವನು, ವಾ, ದಾಶಾರ್ಹರೆಂಬ ಗೋಪಾಲಕರ ಕುಲದಲ್ಲಿ ಹುಟ್ಟಿದವನು. (ಸಾತ್ವತಾಂಪತಿಃ) ಸಾತ್ವತವೆಂಬ ಶಾಸ್ತ್ರವನ್ನು ಕಲ್ಪಿಸಿದ, ವಾ, ಭಾಗವತನ ಯೋಗಕ್ಷೇಮವನ್ನು ವಿಚಾರಿಸುವ ಸ್ವಾಮಿಯಾದವನು. (ಜೀವಃ) ಶರೀರವೆಂಬ ಕ್ಷೇತ್ರದಲ್ಲಿ ಪ್ರಾಣವಾಯುವನ್ನು ಧರಿಸಿಕೊಂಡು ಜೀವರೂಪದಿಂದಿರುವವನು. (ವಿನಯಿತಾ) ಜೀವನನ್ನು ಸನ್ಮಾರ್ಗದಲ್ಲಿ ನಡೆವಂತೆ ಶಿಕ್ಷಿಸತಕ್ಕವನು. (ಸಾಕ್ಷೀ) ಕಾರ್ಯಕಾರಣಗಳೊಂದಕ್ಕೂ ಸಿಲುಕದೆ ಜೀವರು ಮಾಡತಕ್ಕದ್ದನ್ನೆಲ್ಲ ಉದಾಸೀನನಾಗಿ ಇದಿರಿಗೆ ನೋಡುತ್ತಿರುವ, ವಾ, ಸ್ವಾತ್ಮಾತಿರಿಕ್ತವಾದುದೊಂದ

ಜೀವ್ರೋ ವಿನಯಿತಾ ಸಾಕ್ಷೀ ಮುಕುಂದೋ ಮಿತವಿಕ್ರಮಃ ।
ಅಂಭೋನಿಧಿ, ರನಂತಾತ್ಮಾ ಮಹೋದಧಿ ಶಯೋಂತಕಃ॥ (೫೫) [೨೦]
ಅಜೋ ಮಹಾರ್ಹ ಸ್ವಾಭಾವ್ಯೋ ಜಿತಾಮಿತ್ರಃ ಪ್ರಮೋದನಃ ।
ಆನಂದೋ ನಂದನೋ, ನಂದ ಸ್ಸತ್ಯಧರ್ಮಾ ತ್ರಿವಿಕ್ರಮಃ ॥ (೫೬)[೩೦]

---

ನ್ನೂ ನೋಡದಿರುವವನು. (ಮುಕುಂದಃ) ಭಕ್ತರಿಗೆಲ್ಲ ಮುಕ್ತಿಪ್ರದಾತನಾದವನು. (ಅಮಿತವಿಕ್ರಮಃ) ಭೂಮಿ, ಅಂತರಿಕ್ಷ, ದ್ಯುಲೋಕ ಇವುಗಳನ್ನು ಅಳೆವಾಗ ಅಳತೆಗೆ ಬಾರದ ಮೂರುಬಗೆಯ ಪಾದವಿಕ್ಷೇಪಗಳುಳ್ಳ, ವಾ, ಅಪರಿಮಿತಶೌರ್ಯವುಳ್ಳವನು. (ಅಂಭೋನಿಧಿಃ) ಅಂಭಃ ಎಂದರೆ, ದೇವ, ಮನುಷ್ಯ, ಪಿತೃಗಳು, ಇವರಿಗೆ ನಿಧಿಃ ಎಂದರೆ ವಾಸಮಾಡಲಿಕ್ಕೆ ಆಕರವಾಗಿರುವ, ವಾ, ಸರಸ್ಸುಗಳಿಗೆಲ್ಲ ಒಡೆಯನಾಗಿರುವ ಸಾಗರರೂಪನಾದವನು. (೨೦)

(ಅನಂತಾತ್ಮಾ) ದೇಶದಿಂದಲಾಗಲಿ, ಕಾಲದಿಂದಲಾಗಲಿ, ವಸ್ತುವಿನಿಂದಲಾಗಲಿ ಅಳತೆಗೆ ಬಾರದಿರುವ ಆತ್ಮನಾಗಿರುವವನು. (ಮಹೋದಧಿಶಯಃ) ಸರ್ವಭೂತಗಳನ್ನೂ ಸಂಹರಿಸಿ ಏಕಾರ್ಣವವನ್ನಾಗಿ ಮಾಡಿ ಆ ಮಹೋದಧಿಯಲ್ಲಿ ಯೋಗನಿದ್ರೆಯನ್ನು ಮಾಡುವವನು. (ಅಂತಕಃ) ಭೂತಗಳಿಗೆಲ್ಲ ಅಂತವನ್ನುಂಟುಮಾಡುವವನು. (ಅಜಃ) ಕಾಮರೂಪನಾಗಿ ಆವಿರ್ಭವಿಸಿರುವವನು. (ಮಹಾರ್ಹಃ) ಭಕ್ತರ ಪೂಜೆಯನ್ನು ಪಡೆಯಲು ತಕ್ಕವನಾಗಿರುವವನು. (ಸ್ವಾಭಾವ್ಯಃ) ನಿತ್ಯಸಿದ್ಧನೆಂಬ ಸ್ವಭಾವದಿಂದಲೇ ತಿಳಿಯಲು ಸಾಧ್ಯನಾದವನು. (ಜಿತಾಮಿತ್ರಃ) ಒಳಗಿನ ಹಗೆಗಳಾದ ಕಾಮಕ್ರೋಧಾದಿಗಳನ್ನು, ಹೊರಗಿನ ಶತ್ರುಗಳಾದ ರಾವಣಾದಿಗಳನ್ನೂ ಜಯಿಸಿದವನು. (ಪ್ರಮೋದನಃ) ಸ್ವಾತ್ಮಾಮೃತರಸವನ್ನು ಪಾನಮಾಡಿ ಆನಂದಿಸುತ್ತಿರುವ, ವಾ, ಧ್ಯಾನಮಂತ್ರದಿಂದ ಭಕ್ತರಿಗೆ ಆನಂದವನ್ನುಂಟುಮಾಡತಕ್ಕವನು. (ಆನಂದಃ) ಯಾವಾಗಲೂ ಆನಂದಸ್ವರೂಪನಾಗಿರುವವನು, ವಾ, ಆನಂದಗೊಳಿಸುವವರೆಲ್ಲರಿಗೂ ಆನಂದವನ್ನುಂಟುಮಾಡುವವನು. (ನಂದನಃ) ಭಕ್ತರಾದ ಚೇತನರಿಗೆ ಇಹಲೋಕಸುಖವನ್ನು, ಪರಲೋಕಸುಖವನ್ನು ಕೊಟ್ಟು ಸಂತೋಷಪಡಿಸುವವನು.

(ನಂದಃ) ಭಕ್ತಿಯಿಂದ ಭಾವಿಸುವವರಿಗೆ ಸರ್ವಸಮೃದ್ಧಿಯನ್ನುಂಟುಮಾಡುವ, ವಾ, ಸರ್ವೋಪಪತ್ತಿಗಳಿಂದಲೂ ಕೂಡಿರುವುದರಿಂದ ಆನಂ

ಮಹರ್ಷಿಃ ಕಪಿಲಾಚಾರ್ಯಃ ಕೃತಜ್ಞೋ ಮೇದಿನೀಪತಿಃ |
ತ್ರಿಪದ ಸ್ತ್ರಿದಶಾಧ್ಯಕ್ಷೋ ಮಹಾಶೃಂಗಃ, ಕೃತಾಂತಕೃತ್॥ (೫೭) [೬೦]
ಮಹಾವರಾಹೋ ಗೋವಿಂದ ಸ್ಸುಷೇಣಃ ಕನಕಾಂಗದೀ |

---

ವಿಸುತ್ತಿರುವ, ವಾ, ರೂಪ, ಗಂಧ, ರುಚ್ಚು, ಹೆಣ್ಣು ಮೊದಲಾದ ವಿಷಯ ಗಳ ಸಂಬಂಧದಿಂದುಂಟಾದ ಆನಂದವನ್ನು ಪಡೆಯುದಿರುವವನು. (ಸತ್ಯ ಧರ್ಮಾ) ಸತ್ಯವಾದ ಧರ್ಮಜ್ಞಾನಗಳನ್ನೊಳಗೊಂಡಿರುವ, ವಾ, ಯಾವ ವಸ್ತುವು ಹೇಗೆ ಇದೆಯೋ ಅದನ್ನು ಹಾಗೆಯೇ ತಿಳಿಯತಕ್ಕ ಸತ್ಯವೇಧರ್ಮ ವಾಗಿವುಳ್ಳ, ವಾ, ದಿಟವನ್ನು ಹೇಳುವುದು, ಸದಾಚಾರ, ಭೂತದಯೆ, ವಾ, ಹಿಂಸೆ ಮಾಡದಿರುವುದು, ಸತ್ಪಾತ್ರದಾನ, ಶಾಸ್ತ್ರವಿಚಾರ ಎಂಬೀಧರ್ಮ ಗಳನ್ನು ಆಚರಿಸುವುದರಿಂದ ನೋಡಲ್ಪಡತಕ್ಕವನು. (ತ್ರಿವಿಕ್ರಮಃ) ಮೂಲೋಕದಲ್ಲಿಯೂ ಹೆಸರುಗೊಂಡಿರುವ ಶೌರ್ಯವುಳ್ಳವನು, ವಾ, ಮೂ ರುಬಗೆಯೊದ ಪಾದನ್ಯಾಸವುಳ್ಳವನು, ವಾ, ಮೂಲೋಕಗಳನ್ನೂ ಅಳೆದ ವನು. (ಮಹರ್ಷಿಃ) ವೇದಮಂತ್ರಜ್ಞನಾದ ಮುನಿಯರೂಪದಿಂದಿರುವ, ವಾ, ಸಾಂಖ್ಯಶಾಸ್ತ್ರಪ್ರವರ್ತಕರಾದ ಮುನಿಗಳಲ್ಲಿ ವಿಶೇಷಸಾನ್ನಿಧ್ಯವನ್ನು ತೋರಿದವನು. (ಕಪಿಲಾಚಾರ್ಯಃ) ಕಪಿಲರೂಪದಿಂದ ವೇದೋಪದೇಶ ಕಾರ್ಯವನ್ನು ಮಾಡಿ ಕಪಿಲಾಚಾರ್ಯನೆಂದು ಹೆಸರನ್ನು ಪಡೆದವನು [ಮಹ ರ್ಷಿಃಕಪಿಲಾಚಾರ್ಯಃ ಎಂದು ಕೆಲವರು,] (ಕೃತಜ್ಞಃ) ಸ್ವಕಲ್ಪಿತವಾದ ಜಗತ್ತನ್ನೆಲ್ಲ ಚೆನ್ನಾಗಿ ತಿಳಿಯುವವನು. (ಮೇದಿನೀಪತಿಃ) ಮಧುಕೈ ಟಭರೆಂಬ ರಕ್ಕಸರನ್ನು ಕೊಂದು ಕಲ್ಪಿಸಿದ ಮೇದಿನಿಗೆ ಒಡೆಯನಾದ, ವಾ, ವೈಕುಂಠ, ಭಕ್ತರಹೃದಯ, ಸೂರ್ಯಮಂಡಲ ಈ ಮೂರುಸ್ಥಾನಗಳಲ್ಲಿ ವಿಶೇಷ ಸಾನ್ನಿಧ್ಯವನ್ನು ಮಾಡಿರುವ, ವಾ, ಸ್ವರ್ಗ, ಮರ್ತ್ಯ, ಪಾತಾಳಗ ಳನ್ನು ಆಕ್ರಮಿಸಿದವನು. (ತ್ರಿಪದಃ) ಅಮೃತಮಯವಾದ ಮೂರುಪಾ ದಗಳುಳ್ಳ, ವಾ, ಅಗ್ನಿತ್ರಯದಲ್ಲಿ ನೆಲೆಗೊಂಡಿರುವ, ವಾ, ಸೂರ್ಯಮಂಡಲ, ಕ್ಷೀರಸಾಗರ, ಯಜ್ಞವಾಟ ಈಮೂರರಲ್ಲಿ ನೆಲೆಗೊಂಡಿರುವವನು. (ತ್ರಿದ ಶಾಧ್ಯಕ್ಷಃ) ಬಾಲ್ಯ, ಯೌವನ, ಕೌಮಾರಗಳೆಂಬ ಮೂರು ಅವಸ್ಥೆಗಳ ನ್ನು ಹೊಂದಿರುವ ದೇವತೆಗಳಿಗೊಡೆಯನಾದ, ವಾ, ಮೂವತ್ತುವರ್ಷಗಳ ಷ್ಟು ವಯಸ್ಸಿನವರಾದ ದೇವತೆಗಳಿಗೆ ಸ್ವಾಮಿಯಾದ, ವಾ, ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳಿಗೂ ಸ್ವಾಮಿಯಾದವನು

ಗುಹ್ಯೋ ಗಭೀರೋ ಗಹನೋ ಗುಪ್ತ ಶ್ಚಕ್ರಗದಾಧರಃ, ॥ (೫೯) [೫೦]
ವೇಧಾ ಸ್ಸ್ವಾಂಗೋಽಜಿತಃ ಕೃಷ್ಣೋ ದೃಢ ಸ್ಸಂಕರ್ಷಣೋಽಚ್ಯುತಃ ।

---

(ಮಹಾಶೃಂಗಃ) ಮತ್ಸ್ಯಾದಿರೂಪಿಯಾಗಿ ಮಹಾಶೃಂಗವೆಂಬ ಪ್ರಳಯಾರ್ಣವದಲ್ಲಿ ನಾವೆಯೊಳಗೆ ಕ್ರೀಡಿಸುತ್ತಿದ್ದವನು. (೪೦)

(ಕೃತಾಂತಕೃತ್) ಸೃಷ್ಟಿಸಲ್ಪಟ್ಟ ಜಗತ್ತಿಗೆ ಅಂತವನ್ನು ಕಲ್ಪಿಸುವ, ವಾ, ಪ್ರಳಯದಲ್ಲಿ ಕೃತಾಂತನನ್ನೂ ಕತ್ತರಿಸುವವನು. (ಮಹಾವರಾಹಃ) ಆದಿ ವರಾಹರೂಪಿಯಾದವನು. (ಗೋವಿಂದಃ) ವೇದಾಂತವಾಕ್ಯಗಳಿಂದ ತಿಳಿಯಬರುವವನು. (ಸುಷೇಣಃ) ಮಂಗಳಕರವಾದ ಪರಿವಾರ ದೇವತೆಗಳುಳ್ಳವನು. (ಕನಕಾಂಗದೀ) ಸುವರ್ಣಮಯವಾದ ಭುಜಾಭರಣಗಳುಳ್ಳವನು. (ಗುಹ್ಯಃ) ಉಪನಿಷತ್ತುಗಳ ರಹಸ್ಯದಿಂದ ತಿಳಿದುಬರುವಂತೆ, ಹೃದಯಗುಹೆಯೆಂಬ ಆಕಾಶದಲ್ಲಿ ನೆಲೆಗೊಂಡಿರುವವನು. (ಗಂಭೀರಃ) ಜ್ಞಾನೈಶ್ವರ್ಯಬಲಾದಿಗಳಿಂದ ಗಂಭೀರನಾಗಿರುವವನು. (ಗಹನಃ) ಇಂದ್ರಿಯಗಳ ಪ್ರವೃತ್ತಿಗೆ ಗೋಚರಿಸದೆ ದೂರದಲ್ಲಿರುವ, ವಾ, ಅವಸ್ಥಾತ್ರಯಕ್ಕಿಂತಲೂ ದೂರದಲ್ಲಿರುವವನು. (ಗುಪ್ತಃ) ವಾಙ್ಮನಸಗಳಿಗೆ ಗೋಚರಿಸದೆ ಗುಪ್ತನಾಗಿರುವವನು. (ಚಕ್ರಗದಾಧರಃ) ಮನಸ್ಸಿನತತ್ತ್ವರೂಪವಾದ ಚಕ್ರವನ್ನೂ, ಬುದ್ಧಿಯ ತತ್ತ್ವರೂಪವಾದ ಗದೆಯನ್ನೂ, ಲೋಕದಸಂರಕ್ಷಣೆಗಾಗಿ ಧರಿಸಿ, ಗದಾಧರನೆಂಬ ದಿವ್ಯನಾಮವನ್ನು ಪಡೆಸಿರುವವನು. (೫೦)

(ವೇಧಾಃ) ಸಂಕಲ್ಪವುಂಟಾದಂತೆ ಎಲ್ಲವನ್ನೂ ಸೃಷ್ಟಿಸುವವನು. (ಸ್ವಾಂಗಃ) ಬೇರೊಂದು ಸಹಾಯವಿಲ್ಲದೆ ಸ್ವಶರೀರಸಾಧನದಿಂದಲೇ ಸರ್ವವನ್ನೂ, ಕಲ್ಪಿಸುವವನು. (ಅಜಿತಃ) ಯಾವ ಅವತಾರದಲ್ಲಿಯೂ ಯಾರಿಂದಲೂ ಜಯಿಸಲ್ಪಡದಿರುವವನು. (ಕೃಷ್ಣಃ) ವ್ಯಾಸಮಹರ್ಷಿಯ ರೂಪದಿಂದ ಅವತರಿಸಿ ಮಹಾಭಾರತ ರೂಪವಾದ ಇತಿಹಾಸವನ್ನೂ, ಹದಿನೆಂಟು ಪುರಾಣಗಳನ್ನೂ, ಪ್ರಕಾಶಗೊಳಿಸಿ, ವೇದವಿಭಾಗವನ್ನೂ ಮಾಡಿ, ಲೋಕೋಪಕಾರ ಮಾಡಿದವನು. (ದೃಢಃ) ಸ್ವರೂಪಸಾಮರ್ಥ್ಯದಿಂದ ಚಲಿಸದವನು. (ಸಂಕರ್ಷಣಃ) ಪ್ರಳಯಕರ್ತನು. (ಅಚ್ಯುತಃ) ಸೃಷ್ಟಿಸ್ಥಿತಿ ಪ್ರಳಯಗಳಲ್ಲಿ ತನ್ನ ಸ್ವರೂಪಸ್ವಭಾವಗಳಿಗೆ ಚ್ಯುತಿಯಿಲ್ಲದವ

ವರುಣೋ ವಾರುಣೋ ವೃಕ್ಷಃ, ಪುಷ್ಕರಾಕ್ಷೋ ಮಹಾಮನಾಃ॥ ಭಗವಾನ್ [೬೦
ಭಗವಾ ನ್ಭಗಹಾ ನಂದೀ ವನಮಾಲೀ ಹಲಾಯುಧಃ ।
ಆದಿತ್ಯೋ ಜ್ಯೋತಿ ರಾದಿತ್ಯ ಸ್ಸಹಿಷ್ಣು, ರ್ಗತಿಸತ್ತಮಃ ॥ (೬೦) [೭೦]

---

ನು. (ವರುಣಃ) ಸೂರ್ಯರೂಪದಿಂದಿರುತ್ತಾ ಸಂಜೆಯಲ್ಲ ಕಿರಣಗಳನ್ನೆಲ್ಲ ಸಂವರಣಮಾಡಿಕೊಳ್ಳುವವನು. (ವಾರುಣಃ) ವರುಣನ ಮಗನಾದ ವಸಿಷ್ಠನ, ಅಥವಾ ಅಗಸ್ತ್ಯನರೂಪದಿಂದಿರುವವನು. (ವೃಕ್ಷಃ) ದ್ಯುಲೋಕದಲ್ಲಿ ವೃಕ್ಷದಂತೆ ಚಲಿಸದೆ ಇರತಕ್ಕವನು. (೬೦)

(ಪುಷ್ಕರಾಕ್ಷಃ) ಹೃದಯಪುಂಡರೀಕದಲ್ಲಿ ಚಿಂತಿಸಲ್ಪಟ್ಟವನಾಗಿ ಸಾಕ್ಷಾತ್ ದರ್ಶನಕೊಡುವ, ವಾ, ಹೃದಯಪುಂಡರೀಕದಲ್ಲ ವ್ಯಾಪಿಸಿರುವವನು. (ಮಹಾಮನಾಃ) ಮನಸ್ಸಂಕಲ್ಪಮಾತ್ರದಿಂದ ಸೃಷ್ಟಿಸ್ಥಿತ್ಯಂತಗಳನ್ನು ನಿರ್ವಹಿಸುವವನು. (ಭಗವಾನ್) ಸಮಗ್ರವಾದ ಐಶ್ವರ್ಯ, ಧರ್ಮ, ಯಶಸ್ಸು, ಸಂಪತ್ತು, ವೈರಾಗ್ಯ, ಮೋಕ್ಷ ಎಂಬ ಈ ಆರರ ವೈಭವವನ್ನೂ ಸಂಪೂರ್ಣವಾಗಿ ಪಡೆದಿರುವ, ವಾ, ಭೂತಗಳ ಉತ್ಪತ್ತಿವಿನಾಶಗಳನ್ನೂ, ಗಮನಾಗಮನಗಳನ್ನೂ, ವಿದ್ಯಾವಿದ್ಯೆಗಳನ್ನೂ ಅರಿತಸ್ವಾಮಿಯಾದವನು. (ಭಗಹಾ) ದುಷ್ಟರ ಸಮಸ್ತ ಐಶ್ವರ್ಯವನ್ನೂ ಧ್ವಂಸಮಾಡುವವನು. (ನಂದೀ) ಸುಖರೂಪನಾಗಿರುವುದರಿಂದ, ವಾ, ಸರ್ವಸಂಪತ್ಸಮೃದ್ಧಿಯುಳ್ಳೋಣದರಿಂದ ಆನಂದವುಳ್ಳವನು. (ವನಮಾಲೀ) ರೂಪ, ರಸ, ಗಂಧ, ಶಬ್ದ, ಸ್ಪರ್ಶರೂಪವಾದ ವೈಜಯಂತಿಯೆಂಬ ದಿವ್ಯಮಾಲೆಯನ್ನು ಧರಿಸಿರುವವನು. (ಹಲಾಯುಧಃ) ಬಲರಾಮಸ್ವರೂಪನಾಗಿ ಹಲಾಯುಧವನ್ನು ಧರಿಸಿರುವವನು. (ಆದಿತ್ಯಃ) ಅದಿತಿಯಲ್ಲಿ ಕಶ್ಯಪನಿಂದ ವಾಮನರೂಪನಾಗಿ ಅವತರಿಸಿದವನು, ವಾ, ಅದಿತಿಯ ರೂಪಾಂತರವಾದ ದೇವಕಿಯಲ್ಲಿ ಅವತರಿಸಿದವನು. (ಜ್ಯೋತಿರಾದಿತ್ಯಃ) ಆದಿತ್ಯಮಂಡಲದಲ್ಲಿ ಜ್ಯೋತೀರೂಪದಿಂದ ಬೆಳಗುತಲಿರುವ, ವಾ, ತೇಜೋಮಯನಾಗಿಯೂ, ಆದಿತ್ಯರೂಪನಾಗಿಯೂ ಇರುವವನು. (ಸಹಿಷ್ಣುಃ) ಶೀತೋಷ್ಣ, ಸುಖದುಃಖ, ಮಾನಾವಮಾನಗಳೆಂಬ ದ್ವಂದ್ವದುಃಖಗಳ ಸಂಬಂಧವಿಲ್ಲದಿರುವವನು. (೭೦)

(ಗತಿಸತ್ತಮಃ) ಸರ್ವರಿಗೂ ಗತಿಯಾಗಿರುವುದರಿಂದಲೇ ಪುರುಷೋತ್ತಮನೆನಿಸಿರುವವನು. (ಸುಧನ್ವಾ) ಇಂದ್ರಿಯಮಯವಾದ, ಅಥವಾ,

ಸುಧನ್ವಾ ಖಂಡಪರಶು ರ್ದಾರುಣೋ ದ್ರವಿಣಪ್ರದಃ ।
ದಿವಿಸ್ಪೃ ಕ್ಸರ್ವದೃ ಗ್ವ್ಯಾಸೋ ವಾಚಸ್ಪತಿ ರಯೋನಿಜಃ, ॥(೬೧) [೪೦]
ತ್ರಿಸಾಮಾ ಸಾಮಗ ಸ್ಸಾಮ ನಿರ್ವಾಣಂ ಭೇಷಜಂ ಭಿಷಕ್, ।

---

ಶೃಂಗದಿಂದಮಾಡಿದ ಧನುಸ್ಸನ್ನು ಧರಿಸಿರುವವನು. (ಖಂಡಪರಶುಃ) ಶತ್ರುಗಳನ್ನೆಲ್ಲ ಖಂಡಿಸುವ ಕೊಡಲಿಯನ್ನು ಪರಶುರಾಮಾವತಾರದಲ್ಲಿ ಧರಿಸಿದ್ದ, ವಾ, ಅಖಂಡವಾದ ಪರಶುವುಳ್ಳವನು. (ದಾರುಣಃ) ಸನ್ಮಾರ್ಗವಿರೋಧಿಗಳಿಗೆ ಭಯಂಕರನು, ವಾ, ದುಷ್ಟರನ್ನು ಸೀಳಿಬಿಡುವವನು. (ದ್ರವಿಣಪ್ರದಃ) ಭಕ್ತರು ಕೋರುವ ಧನವನ್ನೆಲ್ಲ ದಾನಮಾಡುವವನು. (ದಿವಿಸ್ಪೃಕ್) ದ್ಯುಲೋಕದಲ್ಲಿ ವ್ಯಾಪಿಸಿರುವವನು. (ಸರ್ವದೃಕ್) ಸರ್ವವನ್ನೂ ಸಾಕ್ಷಾತ್ತಾಗಿ ನೋಡುವ, ವಾ, ಸರ್ವರಿಗೂ ಜ್ಞಾನದೃಷ್ಟಿಯನ್ನುಂಟು ಮಾಡುವವನು. (ವ್ಯಾಸಃ) ಋಗ್ವೇದವನ್ನು ಇಪ್ಪತ್ತೊಂದುಬಗೆಯಾಗಿಯೂ, ಯಜುಸ್ಸನ್ನು ನೂರೊಂದು ಭಾಗವಾಗಿಯೂ, ಸಾಮವನ್ನು ಸಾವಿರಪಾಲಾಗಿಯೂ ಶಾಖಾಭೇದದಿಂದ ವಿಭಾಗ ಮಾಡಿದ್ದಲ್ಲದೆ ಮಹಾಪುರಾಣೋಪಪುರಾಣಗಳನ್ನೂ ಪ್ರಕಾಶಗೊಳಿಸಿದವನು. (ವಾಚಸ್ಪತಿಃ) ವಿದ್ಯಾಧಿದೇವತೆಯಾದ ವಿರಿಂಚಿರೂಪನಾಗಿರುವವನು, ವಾ, ವೇದಪುರಾಣ ವಚನಗಳಿಗೆ ದೇವತೆಯಾಗಿರುವವನು. (ಅಯೋನಿಜಃ) ಮಾತೃಗರ್ಭದಲ್ಲಿ ಜನಿಸದವನು, ವಾ, ಅವತಾರಗಳಲ್ಲಿ ಜನಿಸಿದಂತೆ ತೋರಿದರೂ ಜನ್ಮದೋಷಲೇಪವಿಲ್ಲದವನು. (೪೦)

(ತ್ರಿಸಾಮಾ) ವೇದವ್ರತವೆಂಬ ಹೆಸರಿನ ಮೂರುಬಗೆಯ ಸಾಮಗಳಿಂದ ಸ್ತುತಿಸಲ್ಪಟ್ಟವನು. (ಸಾಮಗಃ) ಸಾಮವೇದದಿಂದ ಗಾನಮಾಡಲ್ಪಡುವ, ವಾ, ಸಾಮದಲ್ಲಿ ಪ್ರೀತಿಯುಳ್ಳವನು. (ಸಾಮ) ವೇದಗಳೊಳಗೆ ಸಾಮವೇದ ಸ್ವರೂಪನಾಗಿರುವವನು. (ನಿರ್ವಾಣಂ) ಸರ್ವದುಃಖೋಪಶಮನ ಮಾಡುವ ಪರಮಾನಂದಸ್ವರೂಪನಾಗಿರುವವನು. (ಭೇಷಜಂ) ಸಂಸಾರವೆಂಬ ರೋಗಕ್ಕೆ ಸಿದ್ಧೌಷಧಸ್ವರೂಪನಾಗಿರುವವನು. (ಭಿಷಕ್) ಸಂಸಾರವೆಂಬ ರೋಗದಿಂದ ಬಿಡುಗಡೆಯನ್ನುಂಟುಮಾಡುವ ಪರಮವಿದ್ಯೆಯೆನಿಸಿದ ಗೀತೆಯೆಂಬ ಸಂಜೀವಿನಿಯನ್ನುಪದೇಶಿಸಿದ ವೈದ್ಯನಾಗಿರುವವನು. (ಸನ್ಯಾಸಕೃತ್) ಮೋಕ್ಷಾಪೇಕ್ಷೆಯುಳ್ಳವರಿಗೆ ಸಾಧಕವಾ

ಸಂನ್ಯಾಸಕೃ ಚ್ಛಮ ಶ್ಯಾಂತೊ ನಿಷ್ಠಾ, ಶಾಂತಿಃ ಪರಾಯಣಂ॥ ೬೦ [೯೦
ಶುಭಾಂಗ ಶ್ಯಾಂತಿದ ಸ್ರಷ್ಟಾ ಕುಮುದಃ ಕುವಲೇಶಯಃ ।
ಗೋಹಿತೊ ಗೋಪತಿ ರ್ಗೋಪ್ತಾ,ವೃಷಭಾಕ್ಷೋ ವೃಷಪ್ರಿಯಃ ೬೧[೧೦೦

---

ಗಿರುವ ಸನ್ಯಾಸಾಶ್ರಮುವನ್ನು ಕಲ್ಪಿಸಿದವನು. (ಶಮಃ) ಸನ್ಯಾಸಿಗಳಿಗೆ ಪ್ರಶಮವು ಧರ್ಮವೆಂತಲೂ, ವನವಾಸಿಗಳಿಗೆ ನಿಯುಮವು ಧರ್ಮವೆಂತಲೂ, ಗೃಹಸ್ಥರಿಗೆ ದಾನವೇ ಧರ್ಮವೆಂತಲೂ, ಬ್ರಹ್ಮಚಾರಿಗಳಿಗೆ ಶುಶೂ್ರಷೆಯೇ ಧರ್ಮವೆಂತಲೂ ಹೇಳಿರುವುದರಿಂದ, ಸನ್ಯಾಸಾಶ್ರಮದಲ್ಲಿರುವವರಿಗೆ ಜ್ಞಾನ ಸಾಧನವಾದ ಶಮಸ್ವರೂಪನಾಗಿರುವವನು. (ಶಾನ್ತಃ) ವಿಷಯಸುಖಗಳಲ್ಲಿ ಆಸಕ್ತನಾಗದೆ ನಿಷ್ಕ್ರಿಯನಾಗಿಯೂ, ನಿಷ್ಕಲನಾಗಿಯೂ ಇರುವುದರಿಂದ ಶಾಂತನಾಗಿರುವವನು. (ನಿಷ್ಠಾ) ಪ್ರಳಯದಲ್ಲಿ ಸರ್ವಭೂತಗಳಿಗೂ ಕಟ್ಟಕಡೆಯ ಸ್ಥಾನವಾಗಿರುವವನು. (೯೦)

(ಶಾನ್ತಿಃ) ಸರ್ವವಿದ್ಯೆಗಳೂ ನಿವೃತ್ತಿಯನ್ನು ಪಡೆಯುವ ಶಾಂತಿಸ್ವರೂಪನಾಗಿರುವವನು. (ಪರಾಯಣಂ) ಪುನಃ ಹಿಂದಿರುಗಿಬರುವಿಕೆಯು ಶಂಕೆಯೇ ಇಲ್ಲದಿರುವ ಸ್ಥಾನವಾಗಿರುವವನು. (ಶುಭಾಂಗಃ) ದಿವ್ಯಸುಂದರವಿಗ್ರಹವುಳ್ಳವನು. (ಶಾಂತಿದಃ) ರಾಗದ್ವೇಷಾದಿರಹಿತವಾದ ಶಾಂತಿಯನ್ನು ಭಕ್ತರಿಗೆ ಅನುಗ್ರಹಿಸುವವನು. (ಸ್ರಷ್ಟಾ) ಸರ್ಗಾದಿಯಲ್ಲಿ ಸರ್ವಭೂತಗಳನ್ನೂ ಸೃಜಿಸಿದವನು (ಕುಮುದಃ) ಕು ಎಂದರೆ ಭೂಮಿಯಲ್ಲಿ ಭಕ್ತರೊಪ್ಪಿಸುವ ಪೂಜೆಯಿಂದ, ಮುದಃ ಎಂದರೆ ಸಂತೋಷಿಸುವವನು. (ಕುವಲೇಶಯಃ) ಕು ಎಂದರೆ ಭೂಮಿಯನ್ನು, ವಲ ಎಂದರೆ ಚಲಿಸುವಂತೆ ಮಾಡುವುದು, ಕುವಲಂ, ಎಂದರೆ ಜಲ; ಪ್ರಳಯಕಾಲದೊಳಗೆ ಶಯಃ ಎಂದರೆ ಅರ್ಣವಜಲದಲ್ಲಿ ಪವಳಿಸುವ, ವಾ, [ಕುವಲ-ಬದರಿ] ಋಷಿಪುತ್ರನ ಶಾಪದಿಂದ ಪರೀಕ್ಷಿತ್ತನ್ನು ಕಡಿಯಬೇಕಾಗಿದ್ದು, ಬೋರೆಯ ಹಣ್ಣಿನಲ್ಲಿ ಅಡಗಿದ್ದ ತಕ್ಷಕನ ರೂಪವಾಗಿದ್ದವನು, ವಾ, [ಕುವಲ-ಎಂದರೆ ಸರ್ಪೋದರ] ಆದಿಶೇಷನ ಉದರದ ಮೇಲೆ ಶಯನಮಾಡುವವನು. (ಗೋಹಿತಃ) ಗೋವುಗಳ ಅಭಿವೃದ್ಧಿಗೋಸ್ಕರ ಗೋವರ್ಧನಪರ್ವತವನ್ನು ಎತ್ತಿದ, ವಾ, ಗೋವುಗಳಿಗೆಲ್ಲ ಹಿತವನ್ನು ಕಲ್ಪಿಸಿದವನು. (ಗೋಪತಿಃ) ಗೋಃ- ಎಂದರೆ ಭೂಮಿಯ ಭಾರವನ್ನು ಇಳುಹುವುದಕ್ಕಾಗಿ, ಪತಿಃ ಸ್ವೇಚ್ಛೆಯಿಂದ

ಅನಿವರ್ತೀ ನಿವೃತ್ತಾತ್ಮಾ ಸಂಕ್ಷೇಪ್ತಾ ಕ್ಷೇಮಕೃಚ್ಛಿವಃ ।
ಶ್ರೀವತ್ಸವಕ್ಷಾ ಶ್ರೀವಾಸ ಶ್ರೀಪತಿ, ಶ್ರೀಮತಾಂ ವರಃ ॥ ೬೪ [೧೦]
ಶ್ರೀದ ಶ್ರೀಶ ಶ್ರೀನಿವಾಸ ಶ್ರೀನಿಧಿ ಶ್ರೀವಿಭಾವನಃ ।

---

ಶರೀರಗ್ರಹಣವನ್ನು ಮಾಡಿದ, ವಾ, ಯಾಗ, ವೃಷಭ, ಚಂದ್ರ, ವಾಕ್, ಭೂಮಿ, ದಿಕ್, ಧೇನು, ರಶ್ಮಿ, ದೃಕ್, ಬಾಣ ಸ್ವರ್ಗ, ವಜ್ರ, ಗೋವಿನ ಬಾಲ ಇವುಗಳಲ್ಲಿ ಸಾನ್ನಿಧ್ಯವನ್ನು ತೋರಿರುವವನು. (ಗೋಪ್ತಾ) ಸ್ವಸ್ವರೂಪವನ್ನು ಮಾಯೆಯಿಂದ ಮುಚ್ಚಿಕೊಂಡಿರುವ, ವಾ, ಜಗದ್ರಕ್ಷಕನಾದವನು. (೬೦೦)

(ವೃಷಭಾಕ್ಷಃ) ಧರ್ಮವೇ ದೃಷ್ಟಿಯಾಗಿವುಳ್ಳ, ವಾ, ಸರ್ವಕಾಮಗಳನ್ನು ವರ್ಷಿಸುವ ಕಟಾಕ್ಷವುಳ್ಳವನು. (ವೃಷಪ್ರಿಯಃ) ಧರ್ಮಪ್ರಿಯನಾಗಿರುವ, ವಾ, ಧರ್ಮಪ್ರವೃತ್ತಿ ನಿವೃತ್ತಿಗಳಿಗೆ ಪ್ರಿಯನಾಗಿರುವವನು. (ಅನಿವರ್ತೀ) ದೇವಾಸುರರ ಸಂಗ್ರಾಮದಲ್ಲಿ ಯಾವಾಗಲೂ ಹಿಂದಿರುಗದಿರುವ, ವಾ, ಧರ್ಮಪ್ರಿಯನಾಗಿರುವುದರಿಂದ ಭಕ್ತರಿಗೆ ಎಂದಿಗೂ ವಿಮುಖನಾಗದಿರುವವನು. (ನಿವೃತ್ತಾತ್ಮಾ) ಅಯೋಗ್ಯರಿಗೆ ದರ್ಶನ ಕೊಡದಿರುವಸ್ವರೂಪವುಳ್ಳ,ವಾ,ವಿಷಯಗಳಿಂದ ಹಿಂದಿರುಗಿದ ಮನಸ್ಸುಳ್ಳವನು. (ಸಂಕ್ಷೇಪ್ತಾ) ವ್ಯವಹಾರಸಮಯದಲ್ಲಿ ಜಗದ್ರೂಪದಿಂದ ವಿಸ್ತರಿಸಿದ್ದ ಸ್ವರೂಪವನ್ನು ಪ್ರಳಯದೊಳಗೆ ಸೂಕ್ಷ್ಮರೂಪವಾಗಿ ಮಾಡಿಕೊಳ್ಳುವವನು. (ಕ್ಷೇಮಕೃತ್) ತನ್ನನ್ನು ಅನನ್ಯಭಾವದಿಂದ ಚಿಂತಿಸುವವರ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವವನು. (ಶಿವಃ) ಸ್ಮರಣಮಾತ್ರದಿಂದ ಸರ್ವರಿಗೂ ಸರ್ವಮಂಗಳಗಳನ್ನು ಕಲ್ಪಿಸುವ ಮಂಗಳಸ್ವರೂಪನಾಗಿರುವವನು. (ಶ್ರೀವತ್ಸವಕ್ಷಾಃ) ವಕ್ಷಸ್ಥಲದಲ್ಲಿ ಶ್ರೀವತ್ಸವೆಂಬ ಮಚ್ಚೆಯನ್ನುಳ್ಳವನು. (ಶ್ರೀವಾಸಃ) ಅನವರತವೂ ಹೃದಯದಲ್ಲಿ ಲಕ್ಷ್ಮೀದೇವಿಯನ್ನು ಧರಿಸಿರುವ, ವಾ, ಮೋಕ್ಷಲಕ್ಷ್ಮಿಗೆ ಆಧಾರವಾಗಿರುವವನು. (ಶ್ರೀಪತಿಃ) ಅಮೃತಮಥನ ಸಮಯದಲ್ಲಿ ಶ್ರೀ ದೇವಿಯಿಂದ ಪತಿಯಾಗಿ ವರಿಸಲ್ಪಟ್ಟ, ವಾ, ವಿವಿಧವಾಗಿ ತಿಳಿಯಬರುವ ಪರಾಶಕ್ತಿಗೆ ಒಡೆಯನೆನಿಸಿದವನು. (೧೦)

(ಶ್ರೀಮತಾಂವರಃ) ಋಗ್ಯಜುಸ್ಸಾಮಾದಿರೂಪವಾಗಿರುವ ಸಂಪತ್ತುಳ್ಳ ವಿರಿಂಚಿ ಮೊದಲಾದವರಿಗೆ ಸ್ವಾಮಿಯೆನಿಸಿದವನು. (ಶ್ರೀದಃ) ಭಕ್ತ

ಶ್ರೀಧರ ಶ್ರೀಕರ ಶ್ರೇಯ ಶ್ರೀಮಾ ನ್ಲೋಕತ್ರಯಾಶ್ರಯಃ ॥ ೬೫[೭೦
ಸ್ವಕ್ಷ ಸ್ಸ್ವಂಗ ಶ್ಶತಾನಂದೋ ನಂದಿ ರ್ಜ್ಯೋತಿರ್ಗಣೇಶ್ವರಃ
ವಿಜಿತಾತ್ಮಾ ವಿಧೇಯಾತ್ಮಾ ಸತ್ಕೀರ್ತಿ ಶ್ಛಿನ್ನಸಂಶಯಃ ॥ (೬೬)

---

ರಿಗೆ ತೇಜೋರೂಪವಾದ ಮತ್ತು ಐಶ್ವರ್ಯರೂಪವಾದ ಶ್ರೀಯನ್ನು ಅನುಗ್ರಹಿಸುವವನು. (ಶ್ರೀಶಃ) ಸರ್ವಶಕ್ತಿರೂಪವಾದ ಶ್ರೀಗಳಿಗೆಲ್ಲ ನಿಕ್ಷೇಪರೂಪನಾಗಿರುವವನು. (ಶ್ರೀನಿವಾಸಃ) ಲೋಕದಲ್ಲಿನ ಸಮಸ್ತಸಂಪತ್ತುಗಳಿಗೂ ನಿವಾಸಸ್ಥಾನವಾಗಿರುವ, ವಾ, ಶ್ರೀಮಂತರಲ್ಲಿ ನಿತ್ಯವೂ ನಿವಾಸವಾಗಿರುವವನು. (ಶ್ರೀನಿಧಿಃ) ಪ್ರಾಣಿಗಳಿಗೆ ಅವರವರ ಕರ್ಮಾನುರೂಪವಾದ ಶಕ್ತಿಸಂಪತ್ತುಗಳನ್ನು ಯೋಚಿಸಿಕೊಡುವ ನಿಧಿಸ್ವರೂಪನು. (ಶ್ರೀವಿಭಾವನಃ) ಸರ್ವಭೂತಗಳನ್ನು ಸೃಷ್ಟಿಸುವ ಶಕ್ತಿರೂಪವಾದ ಶ್ರೀಯನ್ನು ಧರಿಸಿರುವವನು. (ಶ್ರೀಧರಃ) ಎಂದಿಗೂ ಅಪಾಯವಿಲ್ಲದ ಸುಖಲಾಭವೆಂಬ ಶ್ರೇಯೋರೂಪನಾಗಿರುವವನು. (ಶ್ರೀಕರಃ) ಸ್ಮರಿಸುವ, ಪೂಜಿಸುವ ಧ್ಯಾನಿಸುವ, ನಮಸ್ಕರಿಸುವ ಭಕ್ತರಿಗೆಲ್ಲ ಬಗೆಬಗೆಯ ಆಯುಷ್ಯ, ಆರೋಗ್ಯ, ಐಶ್ವರ್ಯ, ಶೌರ್ಯ, ಬಲ, ವಿಭವ, ಸುಖಾನುಭವವೊದಲಾದ ಶ್ರೇಯಸ್ಸುಗಳನ್ನು ಕಲ್ಪಿಸುವವನು. (ಶ್ರೀಮಾನ್) ಯಾವವಿಧವಾದದೋಷವೂ ಇಲ್ಲದ ಸಂಪತ್ತನ್ನೊಳಗೊಂಡಿರುವವನು. (ಲೋಕತ್ರಯಾಶ್ರಯಃ) ಮೂಲೋಕಗಳಿಗೂ ಆಶ್ರಯನಾಗಿರುವವನು. (೭೦)

(ಸ್ವಕ್ಷಃ) ಸಮಸ್ತಶುಭಲಕ್ಷಣಗಳಿಂದೊಡಗೂಡಿದ ನೇತ್ರಗಳುಳ್ಳವನು. (ಸ್ವಂಗಃ) ಸಾಮುದ್ರಿಕ ಶಾಸ್ತ್ರೋಕ್ತವಾದ ಶುಭಲಕ್ಷಣಗಳಿಂದೊಡಗೂಡಿದ ಅವಯವಗಳುಳ್ಳವನು. (ಶತಾನಂದಃ) ಮನುಷ್ಯ, ರಾಜ, ದೇವ, ಗಂಧರ್ವ, ಇಂದ್ರ, ಬೃಹಸ್ಪತಿ, ಬ್ರಹ್ಮ, ಇವರುಗಳಲ್ಲಿ ಒಬ್ಬರಿಗಿಂತ ಮತ್ತೊಬ್ಬರಿಗೆ ಉಪನಿಷತ್ತಿನಲ್ಲಿ ಶತಾಂಶಾನಂದದಂತೆ ಹೆಚ್ಚಿಸಿಕೇಳುತ್ತ, ಕಟ್ಟಕಡೆಯಲ್ಲಿ ನಿಂತಬ್ರಹ್ಮಾನಂದಕ್ಕಿಂತಲೂ ಶತಾಂಶಾಧಿಕಾನಂದವುಳ್ಳ, ವಾ, ಸ್ವಾನಂದಲೇಶದಲ್ಲಿ ಪ್ರಪಂಚವನ್ನೆಲ್ಲ ಆನಂದಗೊಳಿಸುತ್ತಿರುವವನು. (ನಂದಿಃ) ಆನಂದಮಯವಿಗ್ರಹವಾಗಿರುವವನು. (ಜ್ಯೋತಿರ್ಗಣೇಶ್ವರಃ) ತೇಜಸ್ಸುಳ್ಳ ಪದಾರ್ಥಗಳ ಸಮುದಾಯಕ್ಕೆಲ್ಲ ಸ್ವಾಮಿಯಾಗಿರುವವನು. (ವಿಜಿತಾತ್ಮಾ) ಸರ್ವವಿಷಯದಲ್ಲಿಯೂ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡಿರುವವನು. (ಅವಿಧೇಯಾತ್ಮಾ) ಯಾರಿಗೂ ವಿಧೇಯ

ಉದೀರ್ಣ, ಸ್ಸರ್ವತಶ್ಚಕ್ಷು ರನೀಶ ಶ್ಶಾಶ್ವತ ಸ್ಸ್ಥಿರಃ । [೩೦]
ಭೂಶಯೋ ಭೂಷಣೋ ಭೂತಿ ರ್ವಿಶೋಕ ಶ್ಶೋಕನಾಶನಃ ॥ ೬೩
ಅರ್ಚಿಷ್ಮಾ ನರ್ಚಿತಃ, ಕುಂಭೋ ವಿಶುದ್ಧಾತ್ಮಾ ವಿಶೋಧನಃ । [೪೦]

---

ತ್ವವನ್ನು ಪಡೆಯದಿರುವ ಸ್ವಭಾವವುಳ್ಳವನು, ವಾ, [ವಿಧೇಯಾತ್ಮಾ-ಬ್ರ ಹ್ಮಾದಿದೇವತೆಗಳನ್ನು ವಿಧೇಯರನ್ನಾಗಿ ಮಾಡಿಕೊಂಡಿರುವ, ವಾ, ಭಕ್ತ ರು-ಇಲ್ಲಿ ಬಾ, ಇಲ್ಲಿ ಇರು, ಇದನ್ನು ಮಾಡು, ಇದನ್ನು ತಿನ್ನು ಎಂದು ವಿಧಿಸಿದ ರೂ ಅದರಂತೆ ನಡೆದುಕೊಳ್ಳುವ ಸ್ವಭಾವವುಳ್ಳವನು. (ಸತ್ಕೀರ್ತಿಃ) ಯಾವ ವಿಧದಲ್ಲಿಯೂ ಕಳಂಕವನ್ನು ಹೊಂದದಿರುವ ಕೀರ್ತಿಯುಳ್ಳವನು (ಛಿನ್ನ ಸಂಶಯಃ) ಸಮಸ್ತ ಪ್ರಪಂಚವೂ ಕರತಲಾಮಲಕದಂತೆ ಕಾಣಬರುತ್ತಿ ರುವುದರಿಂದ ಯಾವಬಗೆಯಾದ ಸಂಶಯವೂ ಇಲ್ಲದಿರುವ, ವಾ, ಭಕ್ತರಿಗೆ ಸಂಶಯವಿಲ್ಲದೆ ತನ್ನನ್ನು ಕಾಣಿಸಿಕೊಳ್ಳುವವನು. (ಉದೀರ್ಣಃ) ಸರ್ವ ಭೂತಗಳಿಗಿಂತಲೂ ಉತ್ತಮೋತ್ತಮನಾಗಿರುವವನು. (೩೦)

(ಸರ್ವತಶ್ಚಕ್ಷುಃ) ದೇಹದ ಎಲ್ಲಕಡೆಗಳಲ್ಲಿಯೂ ಸರ್ವವನ್ನೂ ನೋಡಿ ತಿಳಿಯತಕ್ಕ ಶಕ್ತಿಯನ್ನು ಪಡೆದಿರುವವನು. (ಅನೀಶಃ) ಸರ್ವಕ್ಕೂ ಸ್ವಾ ಮಿಯಾಗಿರುವುದರಿಂದ ಬೇರೊಬ್ಬ ಒಡೆಯನನ್ನು ಪಡೆಯದಿರುವ, ವಾ, ಪರಾಧೀನವಾಗದಿರುವವನು. (ಶಾಶ್ವತಸ್ಸ್ಥಿರಃ) ಪುನಃಪುನಃ ಅವತರಿಸುತ್ತಿ ದ್ದರೂ ವಿಕಾರವನ್ನು ಪಡೆಯದೆ ಸ್ಥಿರವಾಗಿ ನೆಲೆಗೊಂಡಿರುವವನು (ಭೂಶ ಯಃ) ಶ್ರೀರಾಮನಾಗಿ ಅವತರಿಸಿದಾಗ ಲಂಕೆಗೆ ಭೂಮಾರ್ಗವನ್ನು ಸಂ ಪಾದಿಸಲೋಸುಗ ಸಮುದ್ರಪ್ರಾಂತಭೂಮಿಯಲ್ಲಿ ದರ್ಭಶಯನದಲ್ಲಿ ಪವ ಳಿಸಿದ್ದವನು. (ಭೂಷಣಃ) ಭೂಭಾರವನ್ನಿಳಿಸಲು ಸ್ವೇಚ್ಛೆಯಿಂದ ಅನೇ ಕಾವತಾರಗಳನ್ನೆತ್ತಿ ಭೂಮಿಗೆ ಭೂಷಣವನ್ನು ಕಲ್ಪಿಸಿದವನು. (ಭೂತಿಃ) ಸಮಸ್ತವಿಭವಪ್ರದನಾಗಿಯೂ, ಸಕಲವಿಭವಸ್ವರೂಪನಾಗಿಯೂ ಇರುವ, ವಾ, ಭಕ್ತರಿಗೆ, ಪುತ್ರ, ಮಿತ್ರ, ಕಳತ್ರ, ಧನ, ಧಾನ್ಯರೂಪವಾದ ಸಂಪ ತ್ತನ್ನು ಒದಗಿಸಿಕೊಡುವವನು. (ಅಶೋಕಃ) ಪರಮಾನಂದಸ್ವರೂಪನಾ ಗಿರುವುದರಿಂದ ಶೋಕಗಂಧವಿಲ್ಲದಿರುವವನು. [ವಿಶೋಕಃ] (ಶೋಕವಿ ನಾಶನಃ) ಸ್ಮೃತಿಮಾತ್ರದಿಂದ ಭಕ್ತರ ಶೋಕಗಳನ್ನೆಲ್ಲ ನಾಶಗೊಳಿಸು ವವನು. (ಅರ್ಚಿಷ್ಮಾನ್) ಸೂರ್ಯಚಂದ್ರಾಗ್ನಿಗಳನ್ನೂ ತೇಜಸ್ವಿಗಳನ್ನಾಗಿ ಮಾಡುವಷ್ಟು ತೇಜಸ್ಸನ್ನು ಹೊಂದಿರುವ, ವಾ, ವಿಲಕ್ಷಣ ತೇಜಸ್ವಿಯಾದ

ಅನಿರುದ್ಧೋ ಪ್ರತಿರಥಃ ಪ್ರದ್ಯುಮ್ನೋ ಮಿತವಿಕ್ರಮಃ ॥ ೬೪

ಕಾಲನೇಮಿನಿಹಾ ವೀರ ಶ್ಶೌರಿ, ಶ್ಶೂರಜನೇಶ್ವರಃ । [೫೦]

ತ್ರಿಲೋಕಾತ್ಮಾ ತ್ರಿಲೋಕೇಶಃ ಕೇಶವಃ ಕೇಶಿಹಾ ಹರಿಃ ॥ ೬೫

---

ವನು. (ಅರ್ಚಿತಃ) ಸರ್ವಲೋಕಗಳಿಂದ ಅರ್ಚಿಸಲ್ಪಟ್ಟ ಬ್ರಹ್ಮಾದಿಗಳಿಂದಲೂ ಅರ್ಚನೆಗೊಳ್ಳುವವನು. (೪೦)

(ಕುಂಭಃ) ಚಕ್ರಕುಂಭವು ಹೇಗೋ ಹಾಗೆ ಸರ್ವಕ್ಕೂ ಎಡೆಗೊಡುವವನು. (ವಿಶುದ್ಧಾತ್ಮಾ) ಸತ್ವ ರಜ ಸ್ತಮೋಗುಣಗಳನ್ನು ಅತಿಕ್ರಮಿಸಿರುವುದರಿಂದ ವಿಶುದ್ಧವಾದ ಸ್ವರೂಪವುಳ್ಳವನು. (ವಿಶೋಧನಃ) ಸ್ಮರಣಮಾತ್ರದಿಂದ ಭಕ್ತರ ಪಾಪಗಳನ್ನೆಲ್ಲ ಪರಿಹರಿಸಿ ಪರಿಶುದ್ಧರನ್ನಾಗಿ ಮಾಡುವವನು. (ಅನಿರುದ್ಧಃ) ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ವಾಸುದೇವ ಎಂಬ ನಾಲ್ಕುಬಗೆಯ ವ್ಯೂಹದಲ್ಲಿಯೂ ಶತ್ರುಗಳಿಂದ ತಡೆಯಲ್ಪಡದಿರುವವನು. (ಅಪ್ರತಿರಥಃ) ಯಾವಾಗಲೂ ಪ್ರತಿಪಕ್ಷವಿಲ್ಲದಿರುವವನು. (ಪ್ರದ್ಯುಮ್ನಃ) ಅಪರಿಮಿತಸಂಪತ್ತನ್ನೊಳಗೊಂಡಿರುವ, ವಾ, ಚತುರ್ವ್ಯೂಹರೂಪವಿಭವವುಳ್ಳವನು. (ಅಮಿತವಿಕ್ರಮಃ) ಅಪಾರ ವಿಕ್ರಮವುಳ್ಳ, ವಾ, ಹಿಂಸೆಗೊಳಗಾಗದ ಶೌರ್ಯವುಳ್ಳವನು. (ಕಾಲನೇಮಿನಿಹಾ) ಕಾಲನೇಮಿಯೆಂಬ ರಕ್ಕಸನನ್ನು ಹನನಮಾಡಿದವನು. (ಶೌರಿಃ) ವಿವಿಧವೀರರನ್ನೆಲ್ಲ ಕಾಳಗದಲ್ಲಿ ಜಯಿಸಿದ ಶೂರನಾಗಿರುವವನು. (ಶೂರಃ) ಶೂರನೆಂಬ ಅರಸಿನ ಕುಲದಲ್ಲಿ ಅವತರಿಸಿದ, ವಾ, ಶೂರನೆಂದು ಲೋಕಪ್ರಸಿದ್ಧನಾದವನು. (೫೦)

(ಶೂರಜನೇಶ್ವರಃ) ಶೂರರೆಂದು ಪ್ರಸಿದ್ಧರಾಗಿರುವ ಇಂದ್ರನೇಮೊದಲಾದವರಿಗೆಲ್ಲ ಸ್ವಾಮಿಯೊದವನು. (ತ್ರಿಲೋಕಾತ್ಮಾ) ಮೂರುಲೋಕಗಳಿಗೂ ಅಂತರಾತ್ಮನಾಗಿರುವ, ವಾ, ಮೂರುಲೋಕಗಳೂ ಪರಮಾರ್ಥದಲ್ಲಿ ಸ್ವರೂಪದಿಂದ ಭಿನ್ನವಾಗದಿರುವವನು. (ತ್ರಿಲೋಕೇಶಃ) ಮೂರುಲೋಕದ ಜನರನ್ನೂ ತಂತಮ್ಮ ಕೆಲಸದಲ್ಲಿ ಪ್ರವರ್ತಿಸುವಂತೆ ಪ್ರೇರಿಸುವ ಸ್ವಾಮಿಯಾದವನು. (ಕೇಶವಃ) ಸೂರ್ಯಮಂಡಲದಲ್ಲಿ ಸಂಬಂಧಿಸಿರುವ ಕೇಶ ಎಂಬ ಹೆಸರಿನ ಕಿರಣಗಳನ್ನೊಳಗೊಂಡಿರುವ, ವಾ, ಮೂರುವರ್ಣಗಳಿಂದಲೂ ಕ್ರಮವಾಗಿ ಹೇಳಲ್ಪಡುವ ಬ್ರಹ್ಮ, ವಿಷ್ಣು, ಶಿವಸ್ವ

ಕಾಮದೇವಃ ಕಾಮಪಾಲಃ ಕಾಮೀ ಕಾಂತಃ, ಕೃತಾಗಮಃ |[೬೦]
ಅನಿರ್ದೇಶ್ಯವಪು ರ್ವಿಷ್ಣು ರ್ವೀರೋ ನಂತೋ ಧನಂಜಯಃ || ೭೮

ರೂಪವನ್ನು ಪಡೆದಿರುವ, ವಾ, ಕ, ಎಂದರೆ ಬ್ರಹ್ಮ, ಈಶ, ಎಂದರೆ ಶಿವ, ಈ ಇಬ್ಬರನ್ನೂ ಅಂಶಗಳನ್ನಾಗಿ ಒಳಗೊಂಡಿರುವವನು. (ಕೇಶಿಹಾ) ಕೇಶಿ ಎಂಬ ರಕ್ಕಸನನ್ನು ಕೊಂಡವನು. (ಹರಿಃ) ಭಕ್ತರಿಗೆ ಕಾರಣ ಸಹಿತವಾದ ಸಂಸಾರದುಃಖವನ್ನೆಲ್ಲ ಪರಿಹರಿಸುವವನು. (ಕಾಮದೇವಃ) ಧರ್ಮವೇ ಮೊದಲಾದ ಪುರುಷಾರ್ಥಗಳನ್ನು ಬಯಸುವುದರಿಂದ ಪ್ರಾರ್ಥಿಸಲ್ಪಡುವ ದೇವನಾದವನು. (ಕಾಮಪಾಲಃ) ಭಕ್ತರು ಬಯಸುವಕಾಮಗಳನ್ನೆಲ್ಲ ಅನುಗ್ರಹಿಸಿ ಪಾಲಿಸುವವನು. (ಕಾಮೀ) ಪರಿಪೂರ್ಣವಾದ ಸರ್ವಕಾಮಗಳನ್ನೊಳಗೊಂಡಿರುವ, ವಾ, ಭಕ್ತರನ್ನು ಉದ್ಧರಿಸಬೇಕೆಂಬ ಕಾಮವುಳ್ಳವನು. (ಕಾಂತಃ) ಸರ್ವಮೋಹಕರವಾದ ದಿವ್ಯಸುಂದರವಿಗ್ರಹವನ್ನೊಳಗೊಂಡಿರುವ, ವಾ, ದ್ವಿಪರಾರ್ಧವೆಂಬ ಕಾಲದ ಕೊನೆಯಲ್ಲಿ ಕ, ಎಂದರೆ ಬ್ರಹ್ಮನಿಗೆ ಅಂತಃ ಎಂದರೆ ಅಂತವನ್ನುಂಟುಮಾಡುವವನು. (೬೦)

(ಕೃತಾಗಮಃ) ಲೋಕವು ಉದ್ಧಾರವಾಗುವುದಕ್ಕೋಸ್ಕರ ಸ್ವಾಜ್ಞಾರೂಪವಾದ ವೇದಶಾಸ್ತ್ರಗಳನ್ನು ಅಣಿಮಾಡಿಕೊಟ್ಟವನು. (ಅನಿರ್ದೇಶ್ಯವಪುಃ) ಹೀಗೆ ಇರುವವನು, ಎಂದು ಗುಣಾದಿಗಳಿಂದ ನಿರ್ದೇಶಿಸಿ ಹೇಳುವುದಕ್ಕೆ ಅಸಾಧ್ಯವಾಗಿರುವ ಶರೀರವುಳ್ಳವನು. (ವಿಷ್ಣುಃ) ಭೂಮ್ಯಂತರಿಕ್ಷಗಳಲ್ಲಿ ಹರಡಿದ ಕಾಂತಿಯುಳ್ಳ, ವಾ, ದ್ಯಾವಾಭೂಮಿಗಳನ್ನು ಆಕ್ರಮಿಸಿರುವ ತೇಜಸ್ಸುಳ್ಳವನು. (ವೀರಃ) ವಿಚಿತ್ರಗಮನವುಳ್ಳ, ವಾ, ಅದ್ಭುತಕಾಂತಿಯುಳ್ಳ, ವಾ, ಪ್ರಳಯದಲ್ಲಿ ಸರ್ವವನ್ನು ಅಶನಮಾಡುವ, ವಾ, ಅಪರಿಮಿತ ರುಚಿಯನ್ನೊಳಗೊಂಡಿರುವ ದಿವ್ಯನಾಮವುಳ್ಳವನು. (ಅನಂತಃ) ಸರ್ವತ್ರವ್ಯಾಪ್ತಿಯಿಂದಲೂ, ನಿತ್ಯನಾಗಿರುವುದರಿಂದಲೂ, ಸರ್ವಾತ್ಮತೆಯನ್ನು ಪಡೆದಿರುವುದರಿಂದಲೂ ದೇಶಕಾಲವಸ್ತುಗಳ ಅಳತೆಗೆ ಒಳಗಾಗದಿರುವ, ವಾ, ಗಂಧರ್ವರು, ಅಪ್ಸರರು, ಸಿದ್ಧರು, ಕಿನ್ನರರು, ಉರಗರು, ಚಾರಣರು ಈ ಮೊದಲಾದ ಯಾರಿಂದಲೂ ಕೊನೆಗಾಣಲಾಗದ ಕಲ್ಯಾಣಗುಣಗಳುಳ್ಳವನು. (ಧನಂಜಯಃ) ಧನವನ್ನು ಜಯಿಸಲು ಅರ್ಜುನನಿಗೆ ಸಹಾಯಮಾಡಿದ, ವಾ, ಧನಂಜಯನಾದ ಅರ್ಜುನನಲ್ಲಿ ವಿಶೇಷಾಂಶದಿಂದ ಸಾನ್ನಿ

ಬ್ರಹ್ಮಣ್ಯೋ ಬ್ರಹ್ಮಕೃದ್ಬ್ರಹ್ಮಾ ಬ್ರಹ್ಮ ಬ್ರಹ್ಮವಿವರ್ಧನಃ । [೭೦]
ಬ್ರಹ್ಮವಿದ್ಬ್ರಾಹ್ಮಣೋ ಬ್ರಹ್ಮೀ ಬ್ರಹ್ಮಜ್ಞೋ ಬ್ರಾಹ್ಮಣಪ್ರಿಯಃ॥
ಮಹಾಕ್ರಮೋ ಮಹಾಕರ್ಮಾ ಮಹಾತೇಜಾ ಮಹೋರಗಃ ।

---

ಥ್ಯವನ್ನು ತೋರಿದವನು. (ಬ್ರಹ್ಮಣ್ಯಃ) ಬ್ರಹ್ಮಶಬ್ದದಿಂದ ಹೇಳಲ್ಪಡುವ ತಪಸ್ಸು, ವೇದ, ಸತ್ಯ, ಜ್ಞಾನ ಇತ್ಯಾದಿಗಳಿಗೆ ಹಿತನಾದ, ವಾ, ಲೋಕೋದ್ಧಾರಕ್ಕಾಗಿ ತಪಸ್ಸು ಮೊದಲಾದ ಸಾಧನಗಳನ್ನು ಕಲ್ಪಿಸಿರುವವನು. (ಬ್ರಹ್ಮಕೃದ್ಬ್ರಹ್ಮಾ) ಚತುರ್ಮುಖಬ್ರಹ್ಮರೂಪದಿಂದ ಎಲ್ಲವನ್ನೂ ಸೃಷ್ಟಿಸುವ ಮಹತ್ತರನೆನಿಸಿದವನು. (ಬ್ರಹ್ಮ) ಸತ್ಯಜ್ಞಾನಾನಂದಸ್ವರೂಪನಾಗಿರುವ, ವಾ, ಭೇದಗಂಧವಿಲ್ಲದ ಸತ್ತಾಮಾತ್ರವೆನಿಸಿ, ಬುದ್ಧೀಂದ್ರಿಯಗಳಿಗೂ ವಾಕ್ಕಿಗೂ ಗೋಚರಿಸದೆ, ಅನುಭವೈಕವೇದ್ಯನಾಗಿ ಜ್ಞಾನಸ್ವರೂಪನಾಗಿರುವವನು. (ಬ್ರಹ್ಮವಿವರ್ಧನಃ) ತಪಸ್ಸು ಜ್ಞಾನ ಮೊದಲಾದವುಗಳನ್ನು ವೃದ್ಧಿಗೊಳಿಸುವವನು. (೭೦)

(ಬ್ರಹ್ಮವಿತ್) ವೇದ ಮತ್ತು ವೇದಾರ್ಥಗಳ ತತ್ವವನ್ನೆಲ್ಲ ಬಲ್ಲವನು. (ಬ್ರಾಹ್ಮಣಃ) ಮೊದಲು ಬ್ರಹ್ಮರೂಪದಿಂದಲೂ, ತರುವಾಯ ಬ್ರಾಹ್ಮಣರೂಪದಿಂದಲೂ, ವೇದ ಮತ್ತು ವೇದಾರ್ಥಗಳನ್ನು ಪ್ರಕಾಶಪಡಿಸಿದವನು. (ಬ್ರಹ್ಮೀ) ವೇದರೂಪವನ್ನೂ ವೇದಾಂಗರೂಪವನ್ನೂ ಹೊಂದಿರುವವನು (ಬ್ರಹ್ಮಜ್ಞಃ) ಸ್ವಾತ್ಮಭೂತಗಳಾದ ವೇದಗಳನ್ನು ರಹಸ್ಯಗಳೊಂದಿಗೆ ತಿಳಿದಿರುವ, ವಾ, ವೇದಜ್ಞನಾದ ಬ್ರಹ್ಮನಿಂದ ತಿಳಿಯಲ್ಪಡುವವನು. (ಬ್ರಾಹ್ಮಣಪ್ರಿಯಃ) ವೇದಜ್ಞರಾದ ಬ್ರಾಹ್ಮಣರಲ್ಲಿ ವಿಶೇಷಪ್ರೀತಿಯುಳ್ಳ, ವಾ, ಬ್ರಾಹ್ಮಣರಿಗೆ ಪ್ರಿಯನಾದ,ವಾ, "ಕೊಲ್ಲುವ ; ಶಪಿಸುವ, ಕ್ರೂರವಚನವನ್ನು ಹೇಳುವ ಬ್ರಾಹ್ಮಣನನ್ನು ಅವನದೋಷವನ್ನೆಣಿಸದೆ ನನ್ನನ್ನು ಹೇಗೋಹಾಗೆ ಅವನನ್ನು ನಮಸ್ಕರಿಸಬೇಕು" ಹಾಗೆ ಮಾಡದವನು ಪಾಪಿಯಾಗುವನು, ಶಿಕ್ಷೆಗೆ ಯೋಗ್ಯನಾಗುವನು, ಮತ್ತು ನನ್ನವನಾಗುವುದಿಲ್ಲ, ಎಂದು ಅಪ್ಪಣೆಕೊಡಿಸಿ, ಬ್ರಾಹ್ಮಣಪ್ರೀತಿಯನ್ನು ತೋರುವ, ವಾ, ಭೂಲೋಕದಲ್ಲಿರುವ ಬ್ರಾಹ್ಮಣರನ್ನು ಸಂರಕ್ಷಿಸಲಿಕ್ಕಾಗಿ ಅರಣಿಯಲ್ಲಿ ಅಗ್ನಿಯು ಹೇಗೋ ಹಾಗೆ, ದೇವಕಿಯು ಗರ್ಭದಲ್ಲಿ ಅವತರಿಸಿದವನು. (ಮಹಾಕ್ರಮಃ) ಪ್ರಪಂಚನಿರ್ಮಾಣದಲ್ಲಿ ಮಹತ್ತರವಾದ ಕ್ರಮವನ್ನು

ಮಹಾಕರ್ತುರ್ಮಹಾಯಜ್ವಾ ಮಹಾಯಜ್ಞೋ ಮಹಾಹವಿಃ॥ [೪೦] ಓಂ
ಸ್ತವ್ಯಸ್ಸ್ತವಪ್ರಿಯಸ್ಸ್ತೋತ್ರಂ ಸ್ತುತಿಸ್ಸ್ತೋತಾ ರಣಪ್ರಿಯಃ ।
ಪೂರ್ಣಃ, ಪೂರಯಿತಾ ಪುಣ್ಯಃ ಪುಣ್ಯಕೀರ್ತಿ ರನಾಮಯಃ॥ [೯೦] ಓಂ

---

ತೋರಿರುವ, ವಾ, ಮಹತ್ತರವಾದ ಪಾದವಿಕ್ಷೇಪಗಳುಳ್ಳ, ವಾ, ತನ್ನನ್ನು ಪಡೆಯಲಿಕ್ಕೆ ಭಕ್ತರಿಗೆ ಉತ್ತಮವಾದ ಕ್ರಮವನ್ನು ತೋರಿಸಿರುವವನು. (ಮಹಾಕರ್ಮಾ) ಜಗನ್ನಿರ್ಮಾಣರೂಪವಾದ ಮಹಾಕರ್ಮವುಳ್ಳ, ವಾ, ಸಮಸ್ತಪ್ರಾಣಿಗಳಿಗೂ ಆಶ್ಚರ್ಯವನ್ನುಂಟುಮಾಡುವ ವಿಚಿತ್ರಸೃಷ್ಟಿಯನ್ನು ತೋರಿರುವವನು. (ಮಹಾತೇಜಾಃ) ಸೂರ್ಯಚಂದ್ರಾದಿಗಳನ್ನು ಪರಮತೇಜಸ್ವಿಗಳನ್ನಾಗಿ ಮಾಡುವಷ್ಟು ತೇಜಸ್ವಿಯಾದ, ವಾ, ದುಷ್ಟರನ್ನು ಶಿಕ್ಷಿಸತಕ್ಕ ಕ್ರೌರ್ಯಶೌರ್ಯಾದಿಗಳುಳ್ಳವನು. (ಮಹೋರಗಃ) ವಾಸುಕಿಯೆಂಬ ಸರ್ಪದಲ್ಲಿ ವಿಶೇಷಸಾನ್ನಿಧ್ಯವನ್ನು ತೋರಿಸುವವನು. (ಮಹಾಕ್ರತುಃ) ಅಶ್ವಮೇಧವೇ ಮೊದಲಾದ ಮಹಾಯಾಗರೂಪನಾಗಿರುವವನು. (೪೦)

(ಮಹಾಯಜ್ವಾ) ಲೋಕಕ್ಕೆ ಸನ್ಮಾರ್ಗವನ್ನುಉಪದೇಶಿಸಲಿಕ್ಕಾಗಿ ಅನೇಕ ಯಾಗಗಳನ್ನುಮಾಡಿ ತೋರಿದವನು. (ಮಹಾಯಜ್ಞಃ) ಯಜ್ಞಗಳೊಳಗೆ ಜಪಯಜ್ಞರೂಪವಾಗಿರುವವನು. (ಮಹಾಹವಿಃ) ಪ್ರಳಯಕಾಲದಲ್ಲಿ ಪ್ರಪಂಚರೂಪವಾದ ಹವಿಸ್ಸನ್ನು ಪರಿಗ್ರಹಿಸುವ, ವಾ, ಜೀವರೂಪವಾದ ಹವಿಸ್ಸನ್ನು ಮುಕ್ತಿದೆಶೆಯಲ್ಲಿ ತನ್ನಲ್ಲಿ ಏಕಾತ್ಮತೆಯನ್ನುಂಟುಮಾಡುವ ಆಹುತಿಯನ್ನುಳ್ಳವನು. (ಸ್ತವ್ಯಃ) ಸರ್ವರಿಂದಲೂ ಸ್ತುತಿಸಲ್ಪಡುತ್ತಾ, ಸ್ತೋತ್ರಾರ್ಹನಾದ ಮತ್ತೊಬ್ಬನನ್ನುಪಡೆಯದಿರುವವನು. (ಸ್ತವಪ್ರಿಯಃ) ಸ್ತೋತ್ರಗಳನ್ನುವಿಶೇಷವಾಗಿ ಪ್ರೀತಿಸುವವನು. (ಸ್ತೋತ್ರಂ) ಸರ್ವರೂ ಸ್ತುತಿಸುವ ಸ್ತುತಿಯೆಂಬ ಶಬ್ದದರೂಪವಾಗಿರುವವನು. (ಸ್ತುತಃ) ಸ್ತುತಿಕ್ರಿಯಾರೂಪವಾಗಿಯೂ ಇರುವ, ವಾ, ಶೇಷ, ಗರುಡ, ವಿರಿಂಚಿ ಮೊದಲಾದವರಿಂದ ಸ್ತುತಿಸಲ್ಪಡುವವನು. (ಸ್ತೋತಾ) ಶ್ರದ್ಧಾಭಕ್ತಿಗಳಿಂದ ಸ್ತುತಿಸುವ ಮಹಾಪುರುಷರೂಪನಾಗಿರುವ, ವಾ, ಸ್ತುತಿ, ಸ್ತುತ್ಯ, ಸ್ತೋತೃ ಈ ಮೂರು ರೂಪವಾಗಿರುವವನು. (ರಣಪ್ರಿಯಃ) ಶಂಖ, ಚಕ್ರ, ಗದಾ, ಶಾರ್ಙ್ಗಾದಿ ಆಯುಧಗಳನ್ನು ಧರಿಸಿ, ಶಿಷ್ಟರನ್ನುಸಂರಕ್ಷಿಸಲಿಕ್ಕಾಗಿ ರಣವನ್ನುಪ್ರೀತಿಸುವವನು. (ಪೂರ್ಣಃ) ಸರ್ವಕಾಮಗಳಿಂದಲೂ ಸರ್ವಶಕ್ತಿಗಳಿಂದಲೂ ಸಂಪನ್ನನಾಗಿರುವವನು. (೯೦)

ಮನೋಜವ ಸ್ತೀರ್ಥಕರೋ ವಸುರೇತಾ ವಸುಪ್ರದಃ ।
ವಸುಪ್ರದೋ ವಾಸುದೇವೋ, ವಸು ರ್ವಸುಮನಾ ಹವಿಃ ॥[೨೦೦] ೭೪

---

(ಪೂರಯಿತಾ) ಸರ್ವಕಾಮಗಳನ್ನೂ ಪೂರ್ತಿಗೊಳಿಸುವವನು. (ಪುಣ್ಯಃ) ಸ್ಮೃತಿಮಾತ್ರದಿಂದ ಭಕ್ತರಕಲ್ಮಷಗಳನ್ನೆಲ್ಲ ನಾಶಗೊಳಿಸಿ ಪುಣ್ಯವಂತರನ್ನಾಗಿ ಮಾಡುವವನು. (ಪುಣ್ಯಕೀರ್ತಿಃ) ಪರಿಶುದ್ಧವಾದ ಕೀರ್ತಿಯುಳ್ಳ, ವಾ, ಗುಣಸಂಕೀರ್ತನದಿಂದ ಪುಣ್ಯಕೀರ್ತಿಗಳನ್ನುಂಟು ಮಾಡುವವನು. (ಅನಾಮಯಃ) ಅಂತರಂಗವಾದ ಮತ್ತು ಬಹಿರಂಗವಾದ ವ್ಯಾಧಿಗಳಿಂದ ಪೀಡಿಸಲ್ಪಡದಿರುವವನು. (ಮನೋಜವಃ) ಎಲ್ಲವನ್ನೂ ವ್ಯಾಪಿಸುವುದರಲ್ಲಿ ಮನಸ್ಸಿಗಿಂತ ಅಧಿಕವಾದ ವೇಗವುಳ್ಳ, ವಾ, ಭಕ್ತರ ಬಾಧೆಯನ್ನು ಬಹುವೇಗದಿಂದ ಪರಿಹರಿಸುವವನು. (ತೀರ್ಥಕರಃ) ವೇದಾಂಗಗಳು ಆರು, ವೇದಗಳು ನಾಲ್ಕು, ಮೀಮಾಂಸೆ, ನ್ಯಾಯ, ಪುರಾಣ, ಧರ್ಮಶಾಸ್ತ್ರವೆಂಬ ಹದಿನಾಲ್ಕು ವಿದ್ಯೆಗಳಿಗೂ ಕರ್ತೃವೆನಿಸಿ, ಪ್ರಕಾಶಕನೂ ಆಗಿರುವ, ವಾ, ಹಯಗ್ರೀವರೂಪದಿಂದ ಮಧುಕೈಟಭರೆಂಬ ರಕ್ಕಸರನ್ನು ಕೊಂದು, ವಿರಿಂಚಿಮೊದಲಾದವರಿಗೆ ಸೃಷ್ಟ್ಯಾದಿಯಲ್ಲಿಸಕಲವಿದ್ಯೆಗಳನ್ನೂ ಉಪದೇಶಿಸಿದವನು. (ವಸುರೇತಾಃ) ಸೃಷ್ಟ್ಯಾದಿಯಲ್ಲಿ ಮೊದಲು ಜಲವನ್ನು ಸೃಷ್ಟಿಸಿ, ಅದರಲ್ಲಿ ತೇಜಸ್ಸನ್ನು ಹೊಗಿಸಿದ್ದರಿಂದ ತೇಜೋರೂಪವಾದ ವೀರ್ಯವನ್ನುಳ್ಳವನು. (ವಸುಪ್ರದಃ) ಲೋಕದಲ್ಲಿ ಧನಪ್ರದರಿಗೆಲ್ಲರಿಗಿಂತಲೂ ಅಧಿಕ ಧನಪ್ರದನೆನಿಸಿದವನು. (ವಸುಪ್ರದಃ) ಭಕ್ತರಿಗೆ ಅತ್ಯುತ್ತಮವೆನಿಸಿದ ಮುಕ್ತಿರೂಪವಾದ ಧನವನ್ನು ಅನುಗ್ರಹಿಸುವ, ವಾ, ದೈತ್ಯರ ಧನವನ್ನು ಖಂಡಿಸುವವನು. (ವಾಸುದೇವಃ) ವಸುದೇವನ ಮಗನಾದ, ವಾ, ಸರ್ವಭೂತಗಳ ವಾಸಕ್ಕೆ ಸ್ಥಾನವಾದ, ವಾ, ಸಕಲಭೂತಗಳಲ್ಲಿ ವಾಸಿಸುವವನು. (೭೦೦)

(ವಸುಃ) ಮಾಯೆಯಿಂದ ಸ್ವಸ್ವರೂಪವನ್ನು ಆಚ್ಛಾದಿಸಿಕೊಂಡಿರುವವನು, ವಾ, ಎಲ್ಲ ಭೂತಗಳೂ ಇವನಲ್ಲಿಯೂ, ಇವನು ಎಲ್ಲ ಭೂತಗಳಲ್ಲಿಯೂ ವಾಸಿಸುವುದರಿಂದ ವಸುವು. (ವಸುಮನಾಃ) ಸರ್ವವಿಷಯಗಳಲ್ಲಿಯೂ ವಾಸಿಸುತ್ತಿರುವ ಮನಸ್ಸುಳ್ಳ ಎಂದರೆ ಮನಸ್ಸಿನಿಂದ ಎಲ್ಲವನ್ನೂ ಬಲ್ಲ ಸರ್ವಜ್ಞನಾದವನು. (ಹವಿಃ) ಅರ್ಪಣ, ಹವಿಸ್ಸು, ಅಗ್ನಿ, ಹೋತೃ

ಸದ್ಗತಿ ಸ್ಸತ್ಕೃತಿ ಸ್ಸತ್ತಾ ಸದ್ಭೂತಿ ಸ್ಸತ್ಪರಾಯಣಃ ।
ಶೂರಸೇನೋ ಯದುಶ್ರೇಷ್ಠ, ಸ್ಸನ್ನಿವಾಸ ಸ್ಸುಯಾಮುನಃ ॥[೧೮]೭೫
ಭೂತಾವಾಸೋ ವಾಸುದೇವ ಸ್ಸರ್ವಾಸುನಿಲಯೋ ನಲಃ ।
ದರ್ಪಹಾ ದರ್ಪದೋ ದೃಪ್ತೋ ದುರ್ಧರೋ, ಥಾ ಪರಾಜಿತಃ ॥[೨೦] ೭೬

---

ವ್ಯಾಪ್ಯಸ್ಥಾನವು, ಕ್ರಿಯೆಯು ಇವುಗಳೆಲ್ಲದರ ಸ್ವರೂಪವಾಗಿರುವವನು. (ಸದ್ಗತಿಃ) ಸತ್ಯಸ್ವರೂಪದಿಂದ ಸ್ವಾತ್ಮವನ್ನು ಬಲ್ಲವರಿಗೆ ಸದ್ಗತಿಯನ್ನು ಅನುಗ್ರಹಿಸುವ, ವಾ, ಅಸದೃಶವಾದ ಬುದ್ಧಿಯುಳ್ಳವನು. (ಸತ್ಕೃತಿಃ) ಜಗನ್ನಿರ್ಮಾಣಾದಿ ರೂಪವಾಗಿರುವ ಉತ್ತಮಕೃತಿಯುಳ್ಳವನು. (ಸತ್ತಾ) ತನ್ನಂತೆ ಇನ್ನೊಬ್ಬರಿಲ್ಲವೆಯೂ, ತನಗಿಂತ ಬೇರೆ ವಿಧವಾಗಿ ಬೇರೊಬ್ಬ ರಿಲ್ಲದೆಯೂ, ತನ್ನಲ್ಲಿ ಭೇದವಿಲ್ಲದೆಯೂ ಇರುವವನು. (ಸದ್ಭೂತಿಃ) ಚಿದಾತ್ಮನಾದ ಒಬ್ಬನೇ ಆಗಿದ್ದರೂ ಬಹುವಿಧವಾಗಿ ತೋರಿಬರುವವನು. (ಸತ್ಪರಾಯಣಂ) ತತ್ವಜ್ಞರಾದ ಯೋಗಿಗಳಿಗೆ ಸರ್ವೋತ್ತಮವಾದ ಪದವಿಯೆನಿಸಿರುವವನು. (ಶೂರಸೇನಃ) ವೀರಹನುಮನೇ ಮೊದಲಾದ ವರಿಂದೊಡಗೂಡಿದ ಸೇನೆಯುನ್ನುಂಟಾಗಿದ್ದವನು. (ಯದುಶ್ರೇಷ್ಠಃ) ಯಾದವರಲ್ಲಿ ಅಗ್ರಗಣ್ಯನೆನಿಸಿದವನು (೧೦

(ಸನ್ನಿವಾಸಃ) ಸತ್ಪುರುಷರಿಗೆಲ್ಲ ಆಶ್ರಯನಾದವನು. (ಸುಯಾಮುನಃ) ಯಮುನಾತೀರವಾಸಿಗಳನ್ನು ಪರಿವಾರದವರನ್ನಾಗಿ ಕಲ್ಪಿಸಿ ಕೊಂಡಿದ್ದವನು. (ಭೂತಾವಾಸಃ) ಸರ್ವಭೂತಗಳಿಗೂ ಆವಾಸಸ್ಥಾನ ವಾದವನು. (ವಾಸುದೇವಃ) ಮಾಯೆಯಿಂದ ಲೋಕವನ್ನು ಆಚ್ಛಾದಿ ಸುವ ದೇವನಾದವನು. (ಸರ್ವಾಸುನಿಲಯಃ) ಜೀವರಾಶಿಗಳೆಲ್ಲವೂ ನೆಲೆ ಗೊಳ್ಳಲು ನಿಲಯವಾಗಿರುವವನು. (ಅನಲಃ) ಪಾರವಿಲ್ಲದ ಶಕ್ತಿಸಂಪ ತ್ತುಗಳಿಗೆ ನೆಲೆಯಾದವನು. (ದರ್ಪಹಾ) ಧರ್ಮವಿರುದ್ಧವಾದ ಮಾರ್ಗದಲ್ಲಿ ನಡೆವವರ ಕೊಬ್ಬನ್ನು ಧ್ವಂಸಮಾಡುವವನು. (ದರ್ಪದಃ) ಸನ್ಮಾರ್ಗ ದಲ್ಲಿ ನಡೆವವರಿಗೆ ದರ್ಪವನ್ನುಂಟುಮಾಡುವವನು. (ಅದೃಪ್ತಃ) ಆತ್ಮಾ ಮೃತರಸವನ್ನು ಆಸ್ವಾದಿಸುವುದರಿಂದ ನಿತ್ಯತೃಪ್ತನಾಗಿರುವವನು. (ದುರ್ಧರಃ) ಧನ, ಧಾನ್ಯ, ಪುತ್ರದಾರಾದಿಗಳಲ್ಲಿ ವೈರಾಗ್ಯವುಂಟಾದಾಗ್ಯೂ ಜನ್ಮಾಂತರ ಸಂಸ್ಕಾರವೂ, ಸ್ವಾನುಗ್ರಹವೂ ಇಲ್ಲದೆ ಚಿತ್ತದಲ್ಲಿ ಧ್ಯಾನಿಸ ಲು ಅಸಾಧ್ಯವಾದ ಸ್ವರೂಪವುಳ್ಳವನು. (೨೧)

ವಿಶ್ವಮೂರ್ತಿ ರ್ಮಹಾಮೂರ್ತಿ ರ್ದೀಪ್ತಮೂರ್ತಿ ರಮೂರ್ತಿವಾನ್ ।
ಅನೇಕಮೂರ್ತಿ ರವ್ಯಕ್ತ ಶ್ಶತಮೂರ್ತಿ ಶ್ಶತಾನನಃ ॥ ೭೭
ಏಕೋ,ನೈಕ ಸ್ಸವಃ ಕಃ ಕಿಂ ಯ ತ್ತ ತ್ಪದ ಮನುತ್ತಮಮ್। [೭೦]

---

(ಅಪರಾಜಿತಃ) ಅಂತಶ್ಶತ್ರುಗಳಾದ ಕಾಮುಕ್ರೋಧಾದಿಗಳಿಂದಲೂ, ಬಾಹ್ಯಶತ್ರುಗಳಾದ ದೈತ್ಯದಾನವರಿಂದಲೂ ಎಂದೂ ಪರಾಜಯವನ್ನು ಹೊಂದದಿರುವವನು. (ವಿಶ್ವಮೂರ್ತಿಃ) ಪ್ರಪಂಚವೆಲ್ಲವನ್ನೂ ಅಂಗವನ್ನಾಗಿ ಮಾಡಿಕೊಂಡಿರುವವನು. (ಮಹಾಮೂರ್ತಿಃ) ಆದಿಶೇಷನೆಂಬ ದಿವ್ಯಮಂಚದಲ್ಲಿ ಪವಳಿಸಿರುವ ದಿವ್ಯಸುಂದರವಿಗ್ರಹವುಳ್ಳವನು. (ದೀಪ್ತಮೂರ್ತಿಃ) ಸ್ವೇಚ್ಛೆಯಿಂದ ಧರಿಸುವ ದಿವ್ಯಶರೀರವುಳ್ಳ, ವಾ, ಜ್ಞಾನಮಯವಾದ ಮೂರ್ತಿಯುಳ್ಳವನು. (ಅಮೂರ್ತಿಮಾನ್) ಕರ್ಮಸಂಬಂಧದಿಂದುಂಟಾಗುವ ಶರೀರವಿಲ್ಲದಿರುವ, ವಾ, ಪರಮಾರ್ಥದಲ್ಲಿ ಕರಚರಣಾದ್ಯವಯವರಹಿತನಾದವನು. (ಅನೇಕಮೂರ್ತಿಃ) ಧರ್ಮೋದ್ಧಾರಕ್ಕೂ, ಅಧರ್ಮವಿನಾಶಕ್ಕೂ, ದುಷ್ಟಶಿಕ್ಷಣಕ್ಕೂ, ಶಿಷ್ಟಪರಿಪಾಲನೆಗಾಗಿಯೂ ಸ್ವೇಚ್ಛೆಯಿಂದ ಅನೇಕ ಶರೀರಗಳನ್ನು ಗ್ರಹಿಸುವವನು. (ಅವ್ಯಕ್ತಃ) ಲೀಲೆಯಿಂದ ಅನೇಕಮೂರ್ತಿಗಳುಳ್ಳವನಾದರೂ, ಈರೀತಿಯಾಗಿರುವನೆಂದು ನಿರೂಪಿಸಲಿಕ್ಕೆ ಅಸಾಧ್ಯನಾಗಿರುವವನು. (ಶತಮೂರ್ತಿಃ) ವಿರಾಡ್ರೂಪದಲ್ಲಿಯೂ, ಪಾರ್ಥನಿಗೆ ವಿಶ್ವರೂಪವನ್ನು ತೋರಿದಾಗಲೂ, ನೂರಾರು ಶರೀರಗಳುಳ್ಳವನಾಗಿ ಕಾಣಿಸಿಕೊಂಡವನು. (ಶತಾನನಃ) ನಾನಾಶರೀರಗಳುಳ್ಳವನಾಗಿದ್ದುದರಿಂದಲೇ ನೂರಾರುಮುಖಗಳುಳ್ಳವನಾಗಿಯೂ ಇದ್ದವನು. (ಏಕಃ) ಪರಮಾರ್ಥದಲ್ಲಿ ಅದ್ವಿತೀಯನಾಗಿರುವ, ವ್ಯವಹಾರದಲ್ಲಿ ಪ್ರತಿಪಕ್ಷವಿಲ್ಲದಿರುವ,ಅಥವಾ ಅಸಮಾನನಾದವನು. (೭೦

(ನೈಕಃ) ಮಾಯೆಯಿಂದ ಅನೇಕ ರೂಪಧರನಾದವನು. (ಸಃ) ಸೋಮರಸ ಸಾಧ್ಯವಾದ ಯಾಗಸ್ವರೂಪನಾಗಿರುವವನು. (ವಃ) ಸರ್ವಭೂತಗಳಲ್ಲಿಯೂ ವಾಸಮಾಡುವ, ವಾ, ಸರ್ವವನ್ನೂ ಸೃಷ್ಟಿಸುವವನು, (ಸವಃ-ಎಂತಲೂ, ಪಾಠ-ಯಜ್ಞಸ್ವರೂಪನು.) (ಕಃ) ಕ ಎಂಬ ಶಬ್ದದಿಂದ ಹೇಳಲ್ಪಡುವ ಸುಖದ ಸ್ವರೂಪನಾಗಿರುವವನು. (ಕಿಂ) ಸರ್ವಪುರುಷಾರ್ಥ ರೂಪನಾಗಿರುವುದರಿಂದ ವಿಚಾರಾರ್ಹ ಸ್ವರೂಪವಾದವನು.

ಲೋಕಬನ್ಧು ರ್ಲೋಕನಾಥೊ, ಮಾಧವೋ ಭಕ್ತವತ್ಸಲಃ ॥ [೮೦] ೭V

ಸುವರ್ಣವರ್ಣೋ ಹೇಮಾಂಗೋ ವರಾಙ್ಗ ಶ್ಚನ್ದನಾಙ್ಗದೀ ।
ವೀರಹಾ ವಿಷಮ ಶ್ಶೂನ್ಯೋ ಘೃತಾಶೀ, ರಚಲ ಶ್ಚಲಃ ॥ ೭೯ [೫೦]

---

(ಯತ್) ಪ್ರಮಾಣಾಂತರ ಸಿದ್ಧವಾಗದೆ ಸ್ವತಸ್ಸಿದ್ಧನಾಗಿರುವುದರಿಂದಲೇ ಯ ಚ್ಛಬ್ದದಿಂದ ನಿರ್ದೇಶಿಸಲ್ಪಡುವವನು. (ತತ್) ಜಗದ್ರೂಪದಿಂದ ವಿಸ್ತರಿಸಿರುವ, ವಾ, ಓಂ, ತತ್, ಸತ್ ಎಂಬದಾಗಿ ಪದಡಿಕೊಂಡಿರುವವನು (ಪದಮುತ್ತಮಂ) ಮುಮುಕ್ಷುಗಳಿಂದ ಹೊಂದಲ್ಪಡತಕ್ಕವನಾಗಿರುವುದರಿಂ ದಲೇ ಉತ್ತಮೋತ್ತಮಸ್ಥಾನವೆನಿಸಿರುವವನು. (ಲೋಕಬಂಧುಃ) ಲೋ ಕಗಳೆಲ್ಲವೂ ಬಂಧಿಸಲ್ಪಡುವ ಸ್ಥಾನವಾಗಿರುವ, ವಾ, ಲೋಕಗಳಿಗೆಲ್ಲ ಜನಕನಾಗಿರುವುದರಿಂದ ಬಂಧುವೆನಿಸಿರುವ, ವಾ, ಲೋಕಕ್ಕೆ ಹಿತಾಹಿತ ವನ್ನು ತಿಳಿಸುವ ಶ್ರುತಿಸ್ಮೃತಿಗಳನ್ನು ಅಣಿಮಾಡಿ ಬಂಧುಕೃತ್ಯವನ್ನು ನೆರ ವೇರಿಸಿರುವವನು. (ಲೋಕನಾಥಃ) ಲೋಕದಿಂದ ಯಾಚಿಸಲ್ಪಡುವ, ವಾ, ಲೋಕಕ್ಕೆ ಮೋಲನ್ನು ಕಲ್ಪಿಸುವವನು. (೮೦)

(ಮಾಧವಃ) ಮಧುಕುಲವೆಂಬ ಯಾದವವಂಶದಲ್ಲಿ ಅವತರಿಸಿದವನು. (ಭಕ್ತವತ್ಸಲಃ) ಮಕ್ಕಳಲ್ಲಿಡಬೇಕಾದ ಪ್ರೀತಿಗಿಂತಲೂ ಭಕ್ತರಲ್ಲಿ ಅತಿಶ ಯವಾದ ವಾತ್ಸಲ್ಯವನ್ನು ತೋರುವವನು. (ಸುವರ್ಣವರ್ಣಃ) ಮಂಗಳ ಕರವಾದ ವರ್ಣವುಳ್ಳ, ವಾ, ಸೂರ್ಯಮಂಡಲದಲ್ಲಿ ಸುವರ್ಣಸದೃಶವರ್ಣ ನೆಂದು ಧ್ಯಾನಿಸಲ್ಪಡುವವನು. (ಹೇಮಾಂಗಃ) ಸುವರ್ಣಮಯವಾದ ಅವಯವಗಳುಳ್ಳ, ವಾ, ಶುದ್ಧಸತ್ವಮಯವಾದ ದಿವ್ಯದೇಹವುಳ್ಳವನು. (ವರಾಂಗಃ) ಸರ್ವಲಕ್ಷಣ ಸಂಪನ್ನವಾದ ಅವಯವಗಳುಳ್ಳವನು. (ಚಂದ ನಾಂಗದೀ) ಚಂದನದಂತೆ ಆಹ್ಲಾದಕರವಾದ ಭುಜಕೀರ್ತಿಗಳುಳ್ಳವನು. (ವೀರಹಾ) ಧರ್ಮಸಂರಕ್ಷಣೆಗೋಸ್ಕರ ಹಿರಣ್ಯಕಶಿಪು ಮೊದಲಾದ ವೀರ ರನ್ನು ಧ್ವಂಸಮಾಡಿದವನು. (ವಿಷಮಃ) ಅಸಮಾನನಾಗಿರುವುದರಿಂದಲೇ ವಿಷಮನೆನಿಸಿರುವವನು. (ಶೂನ್ಯಃ) ರೂಪರಸಾದಿ ಗುಣಗಳಾಗಲಿ, ಧರ್ಮ ಗಳಾಗಲಿ, ಅವಯವಗಳಾಗಲೀ ಇಲ್ಲದಿರುವುದರಿಂದಲೇ ಶೂನ್ಯನಂತಿ ರುವವನು. (ಘೃತಾಶೀಃ) ಭಕ್ತರಪ್ರಾರ್ಥನೆಗಳನ್ನೆಲ್ಲ ಸಾರ್ಥಕಗೊಳಿ ಸುವವನು. (೫೦)

ಅಮಾನೀ ಮಾನದೋ ಮಾನ್ಯೋ ಲೋಕಸ್ವಾಮೀ ತ್ರಿಲೋಕಧೃತ್ ।
ಸುಮೇಧಾ ಮೇಧಜೋ ಧನ್ಯ, ಸ್ಸತ್ಯಮೇಧಾ ಧರಾಧರಃ ॥ [೬೦] ೮೦
ತೇಜೋ ವೃಷೋ ದ್ಯುತಿಧರ ಸ್ಸರ್ವಶಸ್ತ್ರಭೃತಾಂ ವರಃ ।
ಪ್ರಗ್ರಹೋನಿಗ್ರಹೋ ವ್ಯಗ್ರೋ ನೈಕಶೃಂಗೋ ಗದಾಗ್ರಜಃ, ॥[೭೦]

---

(ಅಚಲಃ) ಸಾಮರ್ಥ್ಯದಿಂದಲೂ, ಜ್ಞಾನಾದಿಗುಣಗಳಿಂದಲೂ ಚಲಿಸದಿರುವವನು. (ಚಲಃ) ವಾಯುರೂಪದಿಂದ ಚಲಿಸುತ್ತಿರುವವನು. (ಅಮಾನೀ) ನಿರ್ಮಲಾಕೃತಿಯುಳ್ಳವನಾದುದರಿಂದ ಒಂದನ್ನು ಮತ್ತೊಂದನ್ನಾಗಿ ತಿಳಿಯುವ ಭ್ರಾಂತಿ ಜ್ಞಾನವಿಲ್ಲದಿರುವವನು. (ಮಾನದಃ) ಸ್ವಮಾಯೆಯಿಂದ ಅನಾತ್ಮಪದಾರ್ಥಗಳಲ್ಲಿ ಆತ್ಮಾಭಿಮಾನವನ್ನೂ, ಆತ್ಮಪದಾರ್ಥದಲ್ಲಿ ಅನಾತ್ಮಬುದ್ಧಿಯನ್ನೂ ಉಂಟುಮಾಡುವ, ವಾ, ಭಕ್ತರಿಗೆ ಮಾನಸತ್ಕಾರಾದಿಗಳನ್ನುಂಟುಮಾಡುವ, ವಾ, ಅಭಕ್ತರ ಅಹಂಕಾರವನ್ನು ಖಂಡಿಸುವ, ವಾ, ತತ್ವವಿದರಿಗೆ ಆತ್ಮಾಭಿಮಾನವನ್ನು ಖಂಡಿಸುವವನು. (ಮಾನ್ಯಃ) ಸರ್ವೇಶ್ವರನಾಗಿರುವುದರಿಂದಲೇ ಸರ್ವಪೂಜ್ಯನಾಗಿರುವವನು. (ಲೋಕಸ್ವಾಮೀ) ಚತುರ್ದಶಲೋಕಗಳಿಗೂ ಈಶ್ವರನಾಗಿರುವುದರಿಂದ ಲೋಕಸ್ವಾಮಿಯೆನಿಸಿದವನು. (ತ್ರಿಲೋಕಧೃತ್) ಲೀಲಾಮಾತ್ರದಿಂದ ಮೂರುಲೋಕಗಳನ್ನೂ ಧರಿಸಿರುವವನು (ಸುಮೇಧಾಃ) ಮಂಗಳಕರವಾದ ಪ್ರಜ್ಞೆಯುಳ್ಳವನು. (ಮೇಧಜಃ) ಪೂಜಾಸ್ವೀಕಾರಕ್ಕಾಗಿ ಯಜ್ಞದಲ್ಲಿ ಸಾನ್ನಿಧ್ಯವನ್ನು ತೋರುವವನು. (ಧನ್ಯಃ) ಸುಕೃತನೆಂಬ ಧನಕ್ಕೆ ಸ್ವಾಮಿಯಾದ, ವಾ, ಕೃತಾರ್ಥನಾಗಿರುವವನು. (೬೦)

(ಸತ್ಯಮೇಧಾಃ) ವ್ಯರ್ಥವೆನಿಸದ ಪ್ರಜ್ಞೆಯುಳ್ಳವನು. (ಧರಾಧರಃ) ಅಂಶಭೂತರಾದ ಅನಂತ, ಶೇಷ, ದಿಗ್ಗಜಾದಿ ರೂಪದಿಂದ ಧರೆಯನ್ನು ಧರಿಸಿರುವವನು. (ತೇಜೋವೃಷಃ) ಆದಿತ್ಯರೂಪದಿಂದ ತೇಜಸ್ಸನ್ನು ವರ್ಷಿಸುತ್ತಿರುವ, ವಾ, ತೇಜಸ್ಸಿನಿಂದ ಭೂಮಿಯ ಜಲವನ್ನು ಸ್ವೀಕರಿಸಿ, ವೃಷ್ಟಿಯ ರೂಪದಿಂದ ಬಿಡುವವನು. (ದ್ಯುತಿಧರಃ) ಸರ್ವತ್ರ ವಿರಾಜಮಾನವಾದ ಬೆಳಕನ್ನು ಧರಿಸಿರುವವನು. (ಸರ್ವಶಸ್ತ್ರಭೃತಾಂವರಃ) ಶಸ್ತ್ರಧಾರಿಗಳೊಳಗೆಲ್ಲ ಅತ್ಯುತ್ತಮನೆನಿಸಿದವನು. (ಪ್ರಗ್ರಹಃ) ಭಕ್ತರು ಒಪ್ಪಿಸಿದ ಪತ್ರ, ಪುಷ್ಪ ಫಲಾದಿಗಳನ್ನು ಆದರದಿಂದ ಗ್ರಹಿಸುವ,

ಚತುರ್ಮೂರ್ತಿ ಶ್ಚತುರ್ಬಾಹು ಶ್ಚತುರ್ವ್ಯೂಹ ಶ್ಚತುರ್ಗತಿಃ ।
ಚತುರಾತ್ಮಾ ಚತುರ್ಭಾವ ಶ್ಚತುರ್ವೇದವಿ ದೇಕಪಾತ್ ॥೪೯॥
ಸಮಾವರ್ತೋ ನಿವೃತ್ತಾತ್ಮಾ, ದುರ್ಜಯೋ ದುರತಿಕ್ರಮಃ । [೫೦]

---

ವಾ, ಭಕ್ತಿಯೆಂಬಪಾಶದಿಂದ ಹಿಡಿಯಲ್ಪಡುವವನು. (ನಿಗ್ರಹಃ) ಸ್ವಭಾವವಿಂದಲೇ ಸರ್ವವನ್ನೂ ಸ್ವಾಧೀನದಲ್ಲಿಟ್ಟುಕೊಂಡಿರುವವನು. (ವ್ಯಗ್ರಃ) ಎಂದಿಗೂ ನಾಶವನ್ನು ಪಡೆಯದಿರುವ, ವಾ, ಭಕ್ತರ ಇಷ್ಟಾರ್ಥವನ್ನು ನೆರವೇರಿಸುವದರಲ್ಲಿ ಜಾಗರೂಕನಾಗಿರುವವನು. (ನೈಕಶೃಂಗಃ) ನಾಲ್ಕು ಬಗೆಯಾದ ಧರ್ಮಶಿರಸ್ಸುಗಳನ್ನೊಳಗೊಂಡಿರುವ, ವಾ, ಸತ್ಕರ್ಮ, ವೈರಾಗ್ಯ, ಭಕ್ತಿ, ಜ್ಞಾನ ಎಂಬ ನಾಲ್ಕು ಸಾಧನಗಳಿಂದ ಸಾಧ್ಯನಾದವನು. (ಗದಾಗ್ರಜಃ) ವಾಸುದೇವನಾಗಿದ್ದಾಗ ಗದನೆಂಬ ತಮ್ಮನನ್ನು ಪಡೆದಿದ್ದ, ವಾ, ವೇದಶಬ್ದರಾಶಿಯಿಂದ ಹೊಗಳಲ್ಪಡುವ, ವಾ, ಭಕ್ತರ ತೊಂದರೆಗಳನ್ನು ಪರಿಹರಿಸಲು ಗದಾಪಾಣಿಯಾಗಿ ಮುಂದೆ ನಿಲ್ಲುವವನು. (೭೦)

(ಚತುರ್ಮೂರ್ತಿಃ) ವಿರಾಟ್, ಸೂತ್ರಾತ್ಮ, ಅವ್ಯಾಕೃತ, ತುರೀಯ ಎಂಬ ನಾಲ್ಕು ಮೂರ್ತಿಗಳನ್ನೊಳಗೊಂಡಿರುವ, ವಾ, ಕೃತ,ತ್ರೇತ,ದ್ವಾಪರ,ಕಲಿ ಎಂಬ ನಾಲ್ಕು ಯುಗಗಳಲ್ಲಿಯೂ ಕ್ರಮವಾಗಿ ಬಿಳುಪು, ಕೆಂಪು, ಅರಿಸಿನ, ಕಪ್ಪು ಬಣ್ಣಗಳಿಂದೊಡಗೂಡಿದ ಮೂರ್ತಿಗಳುಳ್ಳವನು. (ಚತುರ್ಬಾಹುಃ) ಭಕ್ತರಿಗೆ ನಾಲ್ಕು ಪುರುಷಾರ್ಥಗಳನ್ನೂ ಪರಸ್ಪರಾಪೇಕ್ಷೆಯಿಲ್ಲದೆ ಅನುಗ್ರಹಿಸುವ ನಾಲ್ಕು ತೋಳುಗಳುಳ್ಳವನು. (ಚತುರ್ವ್ಯೂಹಃ) ಶರೀರಪುರುಷ, ಛಂದಃಪುರುಷ, ವೇದಪುರುಷ, ಮಹಾಪುರುಷ ಎಂಬದಾಗಿ ಬಹ್ವೃಚೋಪನಿಷತ್ತಿನಲ್ಲಿ ಹೇಳಿರುವಂತೆ ನಾಲ್ಕು ಬಗೆಯಾದ ವ್ಯೂಹವುಳ್ಳವನು. (ಚತುರ್ಗತಿಃ) ನಾಲ್ಕು ವರ್ಣದವರಿಗೂ, ನಾಲ್ಕು ಆಶ್ರಮದವರಿಗೂ ಪ್ರಾಪ್ಯಸ್ಥಾನವಾಗಿರುವವನು. (ಚತುರಾತ್ಮಾ) ರಾಗದ್ವೇಷಾದಿರಹಿತವಾದ ಆತ್ಮವುಳ್ಳವನು, ವಾ, ಮನೋಬುದ್ಧ್ಯಹಂಕಾರಚಿತ್ತವೆಂಬ ನಾಲ್ಕುಗಳಲ್ಲಿಯೂ ನೆಲೆಗೊಂಡಿರುವವನು. (ಚತುರ್ಭಾವಃ) ಧರ್ಮಾರ್ಥಕಾಮಗಳೆಂಬ ಚತುರ್ವಿಧ ಪುರುಷಾರ್ಥಗಳ ಪ್ರಾಪ್ತಿಗೂ ಕಾರಣನಾಗಿರುವವನು. (ಚತುರ್ವೇದವಿತ್) ನಾಲ್ಕು ವೇದಗಳ ತತ್ವವನ್ನೂ ಚೆನ್ನಾಗಿ ಬಲ್ಲವನು. (ಏಕಪಾತ್) ದ್ಯುಲೋಕದಲ್ಲಿ ಅಮೃತಸ್ವರೂಪವಾದ ಮೂ

ದುರ್ಲಭೋ ದುರ್ಗಮೋ ದುರ್ಗೋ ದುರಾವಾಸೋ ದುರಾರಿಹಾ ॥ ೮೩
ಶುಭಾಂಗೋ ಲೋಕಸಾರಂಗ ಸ್ಸುತಂತು, ಸ್ತಂತುವರ್ಧನಃ । [೯೦]
ಇಂದ್ರಕರ್ಮಾ ಮಹಾಕರ್ಮಾ ಕೃತಕರ್ಮಾ ಕೃತಾಗಮಃ ॥ ೮೪

---

ರುಪಾದಗಳುಳ್ಳವನಾದರೂ ಪ್ರಪಂಚರೂಪವಾದ ಏಕಪಾದವನ್ನುಳ್ಳವನು. (ಸಮಾವರ್ತಃ) ಸಂಸಾರಚಕ್ರವನ್ನು ಕ್ರಮವಾಗಿ ನಡೆಸುವವನು. (ನಿವೃತ್ತಾತ್ಮಾ) ಸರ್ವತ್ರ ವ್ಯಾಪಿಸಿರುವುದರಿಂದ ನಿವೃತ್ತಿಯನ್ನು ಪಡೆಯದ ಸ್ವರೂಪವುಳ್ಳ, ವಾ, ವಿಷಯಗಳಿಂದ ಹಿಂದಿರುಗಿದ ಮನಸ್ಸುಳ್ಳವನು (೮೦)

(ದುರ್ಜಯಃ) ಯಾವಾಗಲೂ, ಯಾರಿಂದಲೂ ಜಯಿಸಲ್ಪಡದಿರುವವನು. (ದುರತಿಕ್ರಮಃ) ಯಾರಿಂದಲೂ ಅತಿಕ್ರಮಿಸಲಾಗದ ಆಜ್ಞೆಯನ್ನುಮಾಡುವವನು. (ದುರ್ಲಭಃ) ಅಸಾಧಾರಣವಾದ ಭಕ್ತಿಯೊಂದರಿಂದಲೇ ಲಭ್ಯನಾಗಿರುವ, ವಾ, ಜನ್ಮಾಂತರ ಸಹಸ್ರಗಳಲ್ಲಿ ಆಚರಿಸಿದ ತಪಸ್ಸು, ಧ್ಯಾನ, ಸಮಾಧಿ ಇವುಗಳಿಂದ ಲಭ್ಯನಾಗಿರುವವನು. (ದುರ್ಗಮಃ) ಬಹುಕಷ್ಟದಿಂದ ತಿಳಿಯಲ್ಪಡತಕ್ಕವನಾಗಿರುವವನು. (ದುರ್ಗಃ) ಅನೇಕ ವಿಘ್ನಗಳನ್ನೆಲ್ಲದಾಟಿ ಅಪಾರವಾದಶ್ರಮೆಯಿಂದ ಹೊಂದಲ್ಪಡತಕ್ಕವನಾಗಿರುವವನು. (ದುರಾವಾಸಃ) ಯೋಗಿಗಳು ಅರಣ್ಯದಲ್ಲಿ ಬಿಕ್ಷಾಚರ್ಯೆಯೇ ಮೊದಲಾದ ಶ್ರಮೆಯನ್ನು ಅನುಭವಿಸುವುದಲ್ಲದೆ ಶಮದಮಾದಿ ಕಷ್ಟತರ ಸಾಧನೆಗಳಿಂದ ತಮ್ಮ ಚಿತ್ತದಲ್ಲಿ ವಾಸಮಾಡಿಸಿಕೊಳ್ಳುವವನು. (ದುರಾರಿಹಾ) ದುಷ್ಟರಾಗಿರುವ ಬಾಹ್ಯಾಭ್ಯಂತರ ಶತ್ರುಗಳನ್ನು ಹನನಮಾಡುವವನು. (ಶುಭಾಂಗಃ) ಮಂಗಳಕರವಾದ ಅವಯವಗಳುಳ್ಳವನಾಗಿ ಧ್ಯಾನಿಸಲ್ಪಡುವವನು. (ಲೋಕಸಾರಂಗಃ) ಲೋಕದಲ್ಲಿನ ಸಾರವನ್ನೆಲ್ಲ ತಿಳಿದುಕೊಳ್ಳುವ, ವಾ, ಲೋಕವೇದಗಳಲ್ಲಿ ಸಾರನಾದ ಓಂಕಾರದಿಂದ ತಿಳಿಯಲ್ಪಟ್ಟವನಾಗಿರುವವನು. (ಸುತಂತುಃ) ವಿಚಿತ್ರತರವಾಗಿಯೂ, ರಮಣೀಯವಾಗಿಯೂ ಇರುವಂತೆ ಪ್ರಪಂಚವನ್ನು ಹರಡುವವನು. (೯೦)

(ತಂತುವರ್ಧನಃ) ವಸ್ತ್ರದಲ್ಲಿ ತಂತುವಿನಂತೆ ಹರಡಿರುವ ಪ್ರಪಂಚವನ್ನು ವೃದ್ಧಿಪಡಿಸುವ ಹಾಗೆಯೇ ಕಡೆಯಲ್ಲಿ ಛೇದಿಸುವವನು. (ಇಂದ್ರಕರ್ಮಾ) ಐಶ್ವರ್ಯಾಭಿಮಾನಿಯೊದ ಇಂದ್ರನಂತೆ ಐಶ್ವರ್ಯಪ್ರದವಾದ ಕರ್ಮವುಳ್ಳವನು. (ಮಹಾಕರ್ಮಾ) ರಚಿಸಲಿಕ್ಕೂ, ತಿಳಿಯಲಿಕ್ಕೂ, ಸ್ಮರಿಸೆ

ಉದ್ಭವ ಸ್ಸುಂದರ ಸ್ಸುಂದೋ ರತ್ನ ನಾ ಭ ಸ್ಸುಲೋಚನಃ,। [೮೦೦]
ಅರ್ಕೋವಾಜ ಸನ ಶ್ಶೃಂಗೀ ಜ ಯಂ ತ ಸ್ಸರ್ವವಿ ಜ್ಜಯೀ ॥ ೮೫
ಸುವರ್ಣಬಿಂದು ರಕ್ಷೋಭ್ಯ ಸ್ಸರ್ವ ವಾಗೀಶ್ವರೇ ಶ್ವರಃ ।

---

ಲಿಕ್ಕೂ, ಅಸದಳವೆನಿಸಿದ ನಿರ್ಮಾಣ ಕರ್ಮವುಳ್ಳವನು. (ಕೃತಕರ್ಮಾ) ಮಾಡಬೇಕಾದ ಕರ್ಮಗಳನ್ನೆಲ್ಲ ಮಾಡಿ ಮುಗಿಸಿರುವ, ವಾ, ಧರ್ಮರೂಪ ವಾದ ಕರ್ಮನನ್ನು ಲೋಕೋದ್ಧಾರಕ್ಕಾಗಿ ಅಣಿಮಾಡಿರುವವನು. (ಕೃತಾ ಗಮಃ) ವಿವರಿಸಲು, ಅಥವಾ, ವಿಭಾಗಿಸಲು ಅಸಾಧ್ಯವಾಗಿರುವ, ಅನಂತ ವೇದ ರಾಶಿಯುನ್ನು ಅನುಗ್ರಹಿಸುವವನು. (ಉದ್ಭವಃ) ಸ್ವತಃ ಉದ್ಭವ ರಹಿತನಾಗಿ ಸತ್ಕರ್ಮಕರ್ತೃಗಳನ್ನು ಅವರವರ ಯೋಗ್ಯತಾನುಸಾರವಾಗಿ ಉತ್ತಮಜನ್ಮದಲ್ಲಿ ಉದ್ಭವಿಸುವಂತೆ ಮಾಡುವವನು. (ಸುಂದರಃ) ಸರ್ವ ಪ್ರಪಂಚದಲ್ಲಿಯೂ ಅತಿಶಯವೆನಿಸಿದ ಸೌಭಾಗ್ಯವನ್ನು ಪಡೆದಿರುವವನು. (ಸುಂದಃ) ದಯಾದ್ರ್ರಭಾವವೊಂದೊಡಗೂಡಿರುವ ಎಂದರೆ ಭಕ್ತರಲ್ಲಿ ಬಹು ಳಕನಿಕರವುಳ್ಳವನು (ರತ್ನನಾಭಃ) ರತ್ನದಂತೆನಾಭಿಯುಳ್ಳವನು(ಸುಲೋ ಚನಃ) ವಿಶೇಷ ಜ್ಞಾನರೂಪವಾಗಿರುವ ಲೋಚನಗಳುಳ್ಳವನು. (೮೦೦)

(ಅರ್ಕಃ) ಲೋಕವಂದ್ಯರಾದ ಬ್ರಹ್ಮೇಂದ್ರಾದಿಗಳಿಂದಲೂ ಅರ್ಚಿ ಸಲ್ಪಡುವವನು. (ವಾಜಸನಿಃ) ಅನ್ನಾರ್ಥಿಗಳಿಗೆ ಅಮೃತಾನ್ನದಾನಮಾ ಡಲು ಧುರೀಣನಾದವನು. (ಶೃಂಗೀ) ಪ್ರಳಯಾರ್ಣವದಲ್ಲಿ ಮಹಾಮ ತ್ಸ್ಯರೂಪದಿಂದ ಸಂಚರಿಸುವವನು. (ಜಯಂತಃ) ಶತ್ರುಸಂಘವನ್ನೆಲ್ಲ ವಿಶೇಷವಾಗಿ ಜಯಿಸುವವನು. (ಸರ್ವವಿಜ್ಜಯೀ) ಸರ್ವವಿಷಯಗಳನ್ನೂ ಸಾಮಾನ್ಯಾಕಾರವಾಗಿಯೂ ವಿಶೇಷಾಕಾರವಾಗಿಯೂ ತಿಳಿದಿರುವವರನ್ನು ಜಯಿಸಿದವನು. (ಸುವರ್ಣಬಿಂದುಃ) ಶೋಭನವರ್ಣದಿಂದೊಡಗೂಡಿದ ಅವಯವವುಳ್ಳ, ವಾ, ಸ್ವವಾಚಕವಾದ ಓಂಕಾರದಲ್ಲಿ ಮಂಗಳಕರವಾದ ವರ್ಣವೂ ಬಿಂದುವೂ ಉಳ್ಳವನು. (ಅಕ್ಷೋಭ್ಯಃ) ರಾಗದ್ವೇಷಾದಿಗ ಳಿಂದಲಾಗಲಿ, ಶಬ್ದಾದಿ ವಿಷಯಗಳಿಂದಲಾಗಲಿ, ರಾವಣಾದಿ ಸುರವೈರಿಗ ಳಿಂದಲಾಗಲಿ ಕ್ಷೋಭೆಪಡಿಸಲು; ಅಸಾಧ್ಯನಾಗಿರುವವನು. (ಸರ್ವವಾಗೀ ಶ್ವರೇಶ್ವರಃ) ವಾಗ್ದೇವತೆಗೆ ಈಶ್ವರನಾದ ಬ್ರಹ್ಮನೇಮುಂತಾದವರಿಗೂ ಈಶ್ವರನಾಗಿರುವವನು. (ಮಹಾಪ್ರದಃ) ಬಿಸಿಲಿನ ಬೇಗೆಯಿಂದ ಬೆಂದ

ಮಹಾಹ್ರದೋ ಮಹಾಗರ್ತೋ, ಮಹಾಭೂತೋ ಮಹಾನಿಧಿಃ॥ [೧೦]
ಕುಮುದಃ ಕುಂದರಃ ಕುಂದಃ ಪರ್ಜನ್ಯಃ ಪಾವನೋಽನಿಲಃ ।
ಅಮೃತಾಂಶೋಽಮೃತವಪುಃ, ಸರ್ವಜ್ಞಃ ಸರ್ವತೋಮುಖಃ ॥ [೨೦] ೮೩

---

ವರು ತ ಸ್ವಾದ ತಿಳಿನೀರಿನಿಂದ ತುಂಬಿದ ಮಡುವಿನೊಳಹೊಕ್ಕು ಆನಂದಿಸುವ ಹಾಗೆ, ಸಂಸಾರವೆಂಬ ಕಾಡ್ಗಿಚ್ಚಿನ ಬೇಗೆಯಿಂದಬೆಂದ ಮಂದವಾನವರು ಅವಗಾಹನ ಮಾಡಿ ಆನಂದಿಸಲು ಆನಂದಮಯ ಸಾಗರವಾಗಿರುವ [ಮಹಾರಥಿಕನಾದ] ವನು. (ಮಹಾಗರ್ತಃ) ತೀರವೂ, ಪಾರವೂ ಇಲ್ಲದ ದೊಡ್ಡಕೊರಕಲ ಹಳ್ಳವು ಹೇಗೆ ದಾಟಲಿಕ್ಕಾಗದೆ ಅಪಾಯಕರವಾಗಿರುವುದೋ ಹಾಗೆಯೇ ದುಷ್ಕರಾದವರಿಗೆ ದಾಟಲಸದಳವೆನಿಸಿ ಅಪಾಯಸೂಚಕವಾದ ಮಾಯಾಮಯ ಮಹಾಕೂಪವಾಗಿರುವವನು. (೧೦)

(ಮಹಾಭೂತಃ) ಕಾಲತ್ರಯಗಳಲ್ಲಿಯೂ ಅಳತೆಗೆಬಾರದ ಮಹಾಭೂತಸ್ವರೂಪವಾಗಿರುವವನು (ಮಹಾನಿಧಿಃ) ಸಕಲಭೂತಗಳೂಅಡಗುವುದಕ್ಕೆ ಆಕರವಾಗಿರುವವನು. (ಕುಮುದಃ) ದುಷ್ಟರನ್ನು ಕೊಂದು ಭಾರವನ್ನು ಇಳುಹುವುದರಿಂದ ಭೂಮಿಯಲ್ಲಿರುವ ಸಾಧುಗಳಿಗೆಲ್ಲ ಸಂತೋಷವನ್ನುಂಟುಮಾಡುವವನು. (ಕುಂದರಃ) ಹಿರಣ್ಯಾಕ್ಷನ ಸಂಹಾರಕ್ಕಾಗಿ ವರಾಹರೂಪದಿಂದ ಭೂಮಿಯನ್ನು ಸೀಳಿಕೊಂಡು ಬಂದ, ವಾ, ಕುಂದಕುಸುಮಸದೃಶವಾದ ನಿರ್ಮಲ ಸತ್ಕರ್ಮವನ್ನಾಚರಿಸುವವರಿಗೆ ಸಕಲ ಕಾಮುಗಳನ್ನೂ ಈಡೇರಿಸುವವನು. (ಕುಂದಃ) ಕುಂದಕುಸುಮದಂತೆ ನಿರ್ಮಲವಾದ ಅವಯವವುಳ್ಳ, ವಾ, ಕುಂ, ಎಂದರೆ ಭೂಮಿಯನ್ನು ಕಶ್ಯಪಮುನಿಗೆ ಪರಶುರಾಮಾವತಾರದಲ್ಲಿ ಇಪ್ಪತ್ತೊಂದು ಸಾರಿ ಭೂಮಿಯನ್ನು, ಸುತ್ತಿ ಕ್ಷತ್ರಿಯರನ್ನೆಲ್ಲ ಕೊಂದು, ಆ ಪಾಪಪರಿಹಾರಕ್ಕಾಗಿ ಅಶ್ವಮೇಧಯಾಗವನ್ನು ಮಾಡಿ ದಾನಮಾಡಿದವನು. (ಪರ್ಜನ್ಯಃ) ಬೇಸಗೆಯ ತಾಪವನ್ನು ಮಳೆಯು ಪರಿಹರಿಸುವಂತೆ, ಭಕ್ತರ ಅಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ತಾಪವನ್ನು ಪರಿಹರಿಸುವವನು. (ಪಾವನಃ) ಸ್ಮೃತಿಮಾತ್ರದಿಂದ ಭಕ್ತರ ಪಾಪವನ್ನು ಪರಿಹರಿಸಿ ಪಾವನಮಾಡುವವನು. (ಅನಿಲಃ) ನಿಷ್ಕ್ರಿಯನಾದುದರಿಂದ ಯಾವವಿಧವಾದ ಪ್ರೇರಣೆಯನ್ನೂ ಮಾಡದಿರುವ, ವಾ, ಸದಾ ಸರ್ವ [ವಿಷಯ] ವನ್ನು ತಿಳಿದುಕೊಳ್ಳುತ್ತಿರುವ, ವಾ, ಭಕ್ತರು

ಸುಲಭ ಸ್ಸುವ್ರತ ಸ್ಸಿದ್ಧ ಶ್ಶತ್ರುಜಿ ಚ್ಛತ್ರುತಾಪನಃ ।
ನ್ಯಗ್ರೋಧೋ ದುಂಬರೋ ಶ್ವತ್ಥ ಶ್ಚಾಣೂರಾಂಧ್ರನಿಷೂದನಃ ॥ ೪೪
ಸಹಸ್ರಾರ್ಚಿ, ಸ್ಸಪ್ತಜಿಹ್ವ ಸ್ಸಪ್ತೈಧಾ ಸ್ಸಪ್ತವಾಹನಃ । [೩೦]

---

ಲಭನಾದವನು. (ಅಮೃತಾಶನಃ) ಸ್ವಾತ್ಮಾನಂದಾಮೃತ ರಸಾನುಭವ ಮಾಡುವ, ವಾ, ಸಮುದ್ರಮಥನದಲ್ಲಿ ದೇವತೆಗಳಿಗೆ ಅಮೃತಾಂಶಭೋಜನ ಮಾಡಿಸಿದ, ವಾ, ವಿನಾಶವನ್ನು ಪಡೆಯದ ಆಶೆಯುಳ್ಳವನು. (ಅಮೃತವಪುಃ) ಮೃತಿಯನ್ನು ಹೊಂದದ ಶರೀರವುಳ್ಳವನು. (೨೦)

(ಸರ್ವಜ್ಞಃ) ಸರ್ವದಾ ಸರ್ವವನ್ನೂ ತಿಳಿಯುವ ಸ್ವಭಾವವುಳ್ಳವನು. (ಸರ್ವತೋಮುಖಃ) ಭಕ್ತರಿಗೆ ಸರ್ವಪ್ರಕಾರದಿಂದಲೂ ಸರ್ವಕಾಲ ದೇಶಗಳಲ್ಲಿಯೂ ಸಾಕ್ಷಾತ್ಕರಿಸುವ, ವಾ, ಜ್ಞಾನಮಯನಾಗಿ ಸರ್ವತೋಮುಖನಾದವನು. (ಸುಲಭಃ) ಭಕ್ತಿಯಿಂದ ಸಮರ್ಪಿಸಿದ ಪತ್ರಪುಷ್ಪಾದಿಗಳಿಂದಲೇ ತೃಪ್ತನಾಗಿ ಸುಲಭವಾಗಿ ದರ್ಶನಕೊಡುವವನು. (ಸುವ್ರತಃ) ಸಾಧುಸಂರಕ್ಷಣೆ, ಭಕ್ತಪರಿಪಾಲನೆ, ಶರಣಾಗತಸಂತ್ರಾಣ, ಸತ್ಯಧರ್ಮೋದ್ಧಾರ ಈ ಮೊದಲಾದ ವ್ರತಗಳನ್ನು ಮಾಡುವೆನೆಂಬ ಪ್ರತಿಜ್ಞೆಯುಳ್ಳವನು. (ಸಿದ್ಧಃ) ಪರಾಧೀನನಾಗದೆ ಸ್ವತಃ ಸಿದ್ಧನಾಗಿರುವವನು. (ಶತ್ರುಜಿಚ್ಛತ್ರುತಾಪನಃ) ಶತ್ರುಜಿತ್-ಸಾಧುಹಿಂಸಕರನ್ನೆಲ್ಲ ಸ್ವಶತ್ರುಗಳನ್ನಾಗಿ ಅವರನ್ನುಧ್ವಂಸಮಾಡುವವನು. ಶತ್ರುತಾಪನಃ-ಹಗೆಗಳಿಗೆ ಬಗೆಬಗೆಯಾಗಿ ತಾಪವನ್ನುಂಟುಮಾಡುವವನು. (ನ್ಯಗ್ರೋಧೋದುಂಬರಃ) [ನ್ಯಗ್ರೋಧಃ] ಎಲ್ಲರಿಗೂ ಉತ್ತಮನಾಗಿ ಬೆಳಗುವ, ವಾ, ವಕ್ರಮಾರ್ಗದವರನ್ನು ತುಳಿದು ಅಡಗಿಸುವ, ವಾ, ಸರ್ವಪ್ರಾಣಿಗಳನ್ನೂ ಮಾಯೆಯಿಂದ ಆಚ್ಛಾದಿಸುವವನು, ಉದುಂಬರಃ- ಸರ್ವಕಾರಣನಾಗಿ ಆಕಾಶದಲ್ಲಿ ಬೆಳಗುವ, ವಾ, ಉದುಂಬರ ಎಂದರೆ ಅನ್ನ, ತದ್ರೂಪದಿಂದ ಲೋಕವನ್ನು ಪೋಷಿಸುವವನು. (ಅಶ್ವತ್ಥಃ) ನಾಳೆಯುವರೆಗೆ ನೆಲೆಯಾಗಿಲ್ಲದುದು ಎಂಬ ಅಶ್ವತ್ಥವೃಕ್ಷದಂತಿರುವ ಸಂಸಾರವನ್ನು ಕಲ್ಪಿಸಿರುವ, ವಾ, ವೃಕ್ಷಗಳೊಳಗೆ ಅಶ್ವತ್ಥವೃಕ್ಷದಲ್ಲಿ ವಿಶೇಷಸಾನ್ನಿಧ್ಯವನ್ನು ತೋರಿ ಪೂಜ್ಯನಾಗಿರುವವನು. (ಚಾಣೂರಾಂಧ್ರನಿಷೂದನಃ) ಚಾಣೂರನೆಂಬ ಆಂಧ್ರನನ್ನು ಧ್ವಂಸಮಾಡಿದವನು. (ಸಹಸ್ರಾರ್ಚಿಃ) ಸಾವಿರಕ್ಕಿಂತಲೂ

ಅಮೂರ್ತಿರನಘೋಽಚಿಂತ್ಯೋ ಭಯಕೃದ್ಭಯನಾಶನಃ ॥ ೮೯
ಅಣುರ್ಬೃಹತ್ಕೃಶಃ ಸ್ಥೂಲೋ ಗುಣಭೃನ್ನಿರ್ಗುಣೋ ಮಹಾನ್ ।[೯೦]

---

ವಾರಿದ ತೇಜೋರಾಶಿಗಳುಳ್ಳ, ವಾ, ಏಕಕಾಲದಲ್ಲಿ ಆಕಾಶದೊಳಗೆ ಉದ್ಭವಿಸಿದ ಸಹಸ್ರಸೂರ್ಯರಿಗೆಣೆಯೆನಿಸಿದ ತೇಜೋವಿಶೇಷವುಳ್ಳವನು. (೩೦)

(ಸಪ್ತಜಿಹ್ವಃ) ಅಗ್ನಿರೂಪದಿಂದಿರುವಕಾರಣ ಕಾಳಿ, ಕರಾಳಿ, ಮನೋಜವ, ಸುಲೋಹಿತ, ಸುಧೂಮ್ರವರ್ಣ, ಸ್ಫುಲಿಂಗಿನಿ, ವಿಶ್ವರೂಪಿ, [ವಿಶ್ವಮುಖಿ] ಎಂಬ ಏಳು ಜ್ವಾಲಾರೂಪವಾದ ನಾಲಿಗೆಗಳುಳ್ಳವನು. (ಸಪ್ತೈಧಾಃ) ಏಳು ಬಗೆಯಾದ ಪ್ರಕಾಶ ಸಾಧನಗಳುಳ್ಳವನು. (ಸಪ್ತವಾಹನಃ) ಆದಿತ್ಯರೂಪನಾಗಿರುವುದರಿಂದ ಏಳು ಬಗೆಯಾದ ಕಿರಣಗಳುಳ್ಳ, ವಾ, ಸಪ್ತ ಎಂಬ ಹೆಸರಿನ ವಾಹನಾಶ್ವವುಳ್ಳವನು. (ಅಮೂರ್ತಿಃ) ಘನವಾಗಿ ಇಂದ್ರಿಯವಿಷಯವಾಗುವ ಶರೀರವನ್ನು ಪಡೆಯದಿರುವ, ವಾ, ಅವಯವವಿನ್ಯಾಸದಿಂದೊಡಗೂಡಿರುವ ಶರೀರವಿಲ್ಲದವನು. (ಅನಘಃ) ದುರಿತ, ಪಾಪ ಈ ಎರಡರ ಸಂಬಂಧವೂ ಇಲ್ಲದಿರುವವನು. (ಅಚಿಂತ್ಯಃ) ಯಾವಪ್ರಮಾಣಗಳಿಗೂ ಸಿಲುಕದಿರುವುದರಿಂದ ಚಿಂತಿಸಲಸಾಧ್ಯನಾಗಿರುವವನು. (ಭಯಕೃತ್) ಭಕ್ತರ ಪಾಪವನ್ನು ಕತ್ತರಿಸುವ, ವಾ, ಅಸಾಧುಗಳಿಗೆ ಭಯವನ್ನುಂಟುಮಾಡುವವನು. (ಭಯನಾಶನಃ) ವರ್ಣಾಶ್ರಮಧರ್ಮಗಳಲ್ಲಿ ನಿರತರಾದವರ ಭಯವನ್ನು ನಾಶಗೊಳಿಸುವವನು. (ಅಣುಃ) ಸೂಕ್ಷ್ಮಾತಿಶಯ ಮಹಿಮೆಯನ್ನು ತೋರಿಸಲು, ಹೃದಯಾಕಾಶದಲ್ಲಿ ಅಣುಸ್ವರೂಪನಾಗಿರುವವನು. (ಬೃಹತ್) ಮಹತ್ತಾದ ಪದಾರ್ಥಗಳೆಲ್ಲಕ್ಕಿಂತಲೂ ಮಹತ್ತಾಗವೆನಿಸಿದವನು. (೪೦)

(ಕೃಶಃ) ಹಗುರವಾದ ಪದಾರ್ಥಗಳಿಗಿಂತಲೂ, ಸೂಕ್ಷ್ಮಪದಾರ್ಥಗಳಿಗಿಂತಲೂ ಹಗುರವೂ, ಸೂಕ್ಷ್ಮವೂ ಆಗಿರುವವನು. (ಸ್ಥೂಲಃ) ಅಶಬ್ದನು, ಅಸ್ಪರ್ಶ, ಅರೂಪನು, ಅವ್ಯಯನು, ಅರಸ, ಅಗಂಧನು, ಎಂಬದಾಗಿ ಶ್ರುತಿಯಿಂದಹೇಳಿಸಿಕೊಳ್ಳುತ್ತಿರುವಕಾರಣ ದಪ್ಪನಾಗಿರುವಿಕೆಯೆಂಬ ದ್ರವ್ಯಧರ್ಮವಿಲ್ಲದಿರುವವನು. (ಗುಣಭೃತ್) ಸೃಷ್ಟಿ ಮೊದಲಾದ ಕಾರ್ಯಗಳನಿರ್ವಾಹಕ್ಕಾಗಿ ಸತ್ವಮೊದಲಾದ ಗುಣಗಳನ್ನಾಶ್ರಯಿಸಿದವನು. (ನಿರ್ಗುಣಃ) ಪರಮಾರ್ಥದಲ್ಲಿ ಯಾವದೊಂದು ಗುಣವೂ ಇಲ್ಲದಿರುವವನು.

ಅಧೃತ ಸ್ಸ್ವಧೃತ ಸ್ಸ್ವಾಸ್ಥ್ಯಃ ಪ್ರಾಗ್ವಂಶೋ ವಂಶವರ್ಧನಃ ॥ ೯೦
ಭಾರ ಭೃ ತ್ಕಥಿತೋ ಯೋಗೀ ಯೋಗೀಶ, ಸ್ಸರ್ವಕಾಮದಃ ।
ಆಶ್ರಮ ಶ್ಶ್ರಮಣಃ ಕ್ಷಾಮ ಸ್ಸುಪರ್ಣೋ ವಾಯುವಾಹನಃ ॥ ೯೧

---

(ಮಹಾನ್) ಶಬ್ದಾದಿಗುಣರಹಿತನಾಗಿಯೂ, ನಿರತಿಶಯಸ್ವರೂಪನಾಗಿಯೂ, ನಿತ್ಯಶುದ್ಧಬುದ್ಧಮುಕ್ತಸ್ವರೂಪನಾಗಿಯೂ ಇರುವುದರಿಂದ ಮಹಾತ್ಮನೆನಿಸಿದವನು (ಅಧೃತಃ) ಪೃಥಿವ್ಯಾದಿಭೂತಗಳಿಗೆಲ್ಲ ಆಧಾರಕನಾಗಿದ್ದರೂ ಮತ್ತಾರೂ ಆಧಾರವಿಲ್ಲದೆ ಸ್ವಮಹಿಮೆಯಲ್ಲಿ ನೆಲೆಗೊಂಡಿರುವವನು. (ಸ್ವಧೃತಃ) ಮಹಿಮಾತಿಶಯವನ್ನು ತೋರಲು ಅನ್ಯರನ್ನು ಆಧಾರವಾಗಿ ಮಾಡಿಕೊಳ್ಳದಿರುವವನು. (ಸ್ವಾಸ್ಥ್ಯಃ) ಆಗತಾನೆ ಅರಳಿದ ಕೆಂದಾವರೆಯಂತೆ ಅಂದವಾದ ಮುಖದ ಸೊಬಗುಳ್ಳ, ವಾ. ಪುರುಷಾರ್ಥವನ್ನು ಬೋಧಿಸುವ ವೇದರಾಶಿಯನ್ನೆಲ್ಲ ಪ್ರಕಾಶಗೊಳಿಸಿದ ಸುಮುಖವುಳ್ಳವನು. (ಪ್ರಾಗ್ವಂಶಃ) ಲೋಕದಲ್ಲಿ ಕಾಣಬರುವ ವಂಶಗಳೆಲ್ಲಕ್ಕಿಂತಲೂ ಮೊದಲೇ ಪ್ರಪಂಚವೆಂಬ ವಂಶವನ್ನು ಕಲ್ಪಿಸಿರುವವನು. (ವಂಶವರ್ಧನಃ) ಸೃಷ್ಟಿಯಲ್ಲಿ ಪ್ರಪಂಚವೆಂಬ ವಂಶವನ್ನು ವೃದ್ಧಿಗೊಳಿಸುವ, ವಾ, ಪ್ರಳಯದಲ್ಲಿ ಪ್ರಪಂಚವನ್ನು ಛೇದಿಸುವ ಸ್ವಭಾವವುಳ್ಳವನು. (೯೦)

(ಭಾರಭೃತ್) ಆದಿಶೇಷ, ಕೂರ್ಮ, ದಿಗ್ಗಜ, ಇತ್ಯಾದಿ ರೂಪದಿಂದ ಭೂಮಿಯ ಭಾರವನ್ನು ಹೊರತಕ್ಕವನು. (ಕಥಿತಃ) ಪರಾತ್ಪರನೆಂದು ಸರ್ವವೇದಗಳಿಂದಲೂ, ರಾಮಾಯಣ, ಭಾರತ ಮೊದಲಾದುವುಗಳ ಆದ್ಯಂತಗಳಲ್ಲಿಯೂ ಹೊಗಳಲ್ಪಡುವನು. (ಯೋಗೀ) ಯೋಗ ಎಂದರೆ ಜ್ಞಾನ, ಅದರಿಂದ ತಿಳಿಯಲ್ಪಡುವ, ವಾ, ಯೋಗವೆಂದರೆ ಸಮಾಧಿ, ಅದರಿಂದ ಯಾವಾಗಲೂ ಧರಿಸಲ್ಪಡುವ, ವಾ, ಬದರಿಕಾಶ್ರಮದಲ್ಲಿ ಯೋಗನಿರತನಾಗಿದ್ದವನು. (ಯೋಗೀಶಃ) ಯಾವವಿಘ್ನಗಳಿಂದಲೂ ಅಡ್ಡಿಮಾಡಲ್ಪಡದಿರುವ ಯೋಗವುಳ್ಳವನಾದುದರಿಂದಲೇ ಯೋಗೀಶನೆನಿಸಿರುವವನು. (ಸರ್ವಕಾಮದಃ) ಭಕ್ತರ ಸರ್ವಕಾಮಗಳನ್ನೂ ಅನುಗ್ರಹಿಸುವವನು. (ಆಶ್ರಮಃ) ಸಂಸಾರವೆಂಬ ಅರಣ್ಯದಲ್ಲಿ ಭ್ರಮಿಸುವವರಿಗೆಲ್ಲ ಆಶ್ರಮಸ್ಥಾನವಾಗಿರುವವನು. (ಶ್ರಮಣಃ) ಅವಿವೇಕಿಗಳನ್ನು ಸಂತಾಪಗೊಳಿಸುವವನು (ಕ್ಷಾಮಃ) ದುಷ್ಟರನ್ನು ಶಿಕ್ಷಿಸುವ, ವಾ, ಪ್ರಳಯದಲ್ಲಿ ಸರ್ವವನ್ನೂ ಕ್ಷಯಿ

ಧನುರ್ಧರೋ ಧನುರ್ವೇದೋ ದಣ್ಡೋ ದಮಯಿತಾ ದಮಃ ।
ಅಪರಾಜಿತ ಸ್ಸರ್ವಸಹೋ ನಿಯನ್ತಾ ನಿಯಮೋ ಯಮಃ, ॥ ೯೦ [೭೦]
ಸತ್ವವಾನ್ ಸಾತ್ವಿಕ ಸ್ಸತ್ಯ ಸ್ಸತ್ಯಧರ್ಮ ಪರಾಯಣಃ ।

---

ಸಿಹೋಗುವಂತೆ ಮಾಡುವವನು. (ಸುಪರ್ಣಃ) ಸಂಸಾರರೂಪವೃಕ್ಷದಿಂ ದಿರುವುದರಿಂದ ವೇದಗಳನ್ನು ಪರ್ಣಗಳಂತೆ ಮಾಡಿಕೊಂಡಿರುವವನು. (ವಾಯುವಾಹನಃ) ಪ್ರಪಂಚದಲ್ಲಿನ ಭೂತವಾಯುವನ್ನೂ, ದೇಹಗಳಲ್ಲಿ ಪ್ರಾಣವಾಯುವನ್ನೂ ಸಂಚಾರಗೊಳಿಸುತ್ತಿರುವವನು. (೬೦)

(ಧನುರ್ಧರಃ) ಲೋಕದ ಬಿಲ್ಲಾಳುಗಳೊಳಗೆಲ್ಲ ಮೊದಲನೆಯುವ ನೆನಿಸಿದ ಧನುರ್ಧರನಾದ ಶ್ರೀರಾಮರೂಪನಾಗಿ ಅವತರಿಸಿದ್ದವನು. (ಧನುರ್ವೇದಃ) ಸಮಸ್ತ ಅಸ್ತ್ರವಿದ್ಯೆಗೂ ಮೂಲವಾದ ಧನುರ್ವೇದಸ್ವರೂಪನಾಗಿರುವವನು. (ದಂಡಃ) ದುಷ್ಟರನ್ನು ಅಡಗಿಸತಕ್ಕ ಶಿಕ್ಷೆಯರೂಪವಾಗಿರುವ. ವಾ, ದಂಡದಫಲವಾದ ಅಡಗಿಸುವ ಸ್ವರೂಪವುಳ್ಳವನು. (ದಮಯಿತಾ) ಮೃತ್ಯು, ಮಹಾರಾಜಾದಿರೂಪದಿಂದ ಪ್ರಜೆಗಳನ್ನು ಶಿಕ್ಷಿಸುತ್ತಿರುವವನು, (ಅದಮಃ) ಬೇರೊಬ್ಬ ಶಿಕ್ಷಕನನ್ನು ಪಡೆಯ ದವನು. (ಅಪರಾಜಿತಃ) ಯಾವಾಗಲೂ, ಎಲ್ಲಿಯೂ, ಯಾರಿಂದಲೂ ಪರಾಜಯವನ್ನು ಹೊಂದದಿರುವವನು. (ಸರ್ವಸಹಃ) ಸರ್ವಕಾರ್ಯಸಮರ್ಥನಾದ, ವಾ, ಎಂತಹ ಶತ್ರುಗಳು ಇದುರಿಸಿದರೂ ತಾಳಬಲ್ಲವನು. (ನಿಯಂತಾ) ಎಲ್ಲರನ್ನೂ ಅವರವರ ಕೆಲಸದಲ್ಲಿ ನೆಲೆಗೊಳಿಸುವವನು. (ನಿಯಮಃ) ಸರ್ವನಿಯಾಮಕನಾಗಿರುವುದರಿಂದಲೇ ಬೇರೊಬ್ಬನಿಯಾಮಕನಿಲ್ಲದಿರುವವನು. (ಯಮಃ) ಸ್ವತಃ ಯಮಸ್ವರೂಪನಾಗಿರುವುದರಿಂದ ಬೇರೊಬ್ಬ ಯಮನನ್ನು ಹೊಂದದಿರುವ, ವಾ, ಯಮನಿಯಮಗಳೆಂಬ ಯೋಗಾಂಗಸ್ವರೂಪನಾಗಿರುವವನು. (೭೦)

(ಸತ್ವವಾನ್) ಶೌರ್ಯವೀರತ್ವಾದಿ ರೂಪವಾಗಿರುವ ಸತ್ವ (ಬಲ) ವನ್ನು ಪಡೆದಿರುವವನು. (ಸಾತ್ವಿಕಃ) ರಜಸ್ತಮೋಗುಣ ಗಂಧವಿಲ್ಲದ ಸತ್ವಗುಣದಲ್ಲಿಯೇ ನೆಲೆಗೊಂಡಿರುವವನು. (ಸತ್ಯಃ) ಸಾಧುಗಳ ಧರ್ಮವಾದ ಸತ್ಯದರೂಪದಿಂದಿರುವವನು. (ಸತ್ಯಧರ್ಮಪರಾಯಣಃ) ಯಥಾರ್ಥವನ್ನು ಹೇಳುವಿಕೆ ಎಂಬ ಸತ್ಯ, ಸತ್ಕಾರ್ಯದಲ್ಲಿ ಪ್ರೇರಿಸುವಿಕೆ ಎಂಬ ಧರ್ಮ ಇವುಗಳ

ಅಭಿಪ್ರಾಯಃ ಪ್ರಿಯಾರ್ಹೋಽರ್ಹಃ ಪ್ರಿಯಕೃತ್ಪ್ರೀತಿವರ್ಧನಃ ॥ ೯೩
ವಿಹಾಯಸಗತಿ, ಜ್ಯೋತಿಸ್ಸುರುಚಿ ರ್ಹುತಭುಗ್ವಿಭುಃ । [೮೦]
ರವಿ ರ್ವಿರೋಚನ ಸ್ಸೂರ್ಯ ಸ್ಸವಿತಾ ರವಿಲೋಚನಃ ॥ ೯೪

---

ಲ್ಲಿ ನೆಲೆಗೊಂಡಿರುವವನು. (ಅಭಿಪ್ರಾಯಃ) ಪುರುಷಾರ್ಥಗಳನ್ನು ಬಯಸುವವರ ಕೋರಿಕೆಗೆ ಗುರಿಯಾದ, ವಾ, ಪ್ರಳಯದಲ್ಲಿ ಇದಿರಾಗಿ ಬಂದು ಪ್ರವೇಶಿಸುವವರಿಗೆಲ್ಲ ಆಸರೆಯಾದವನು. (ಪ್ರಿಯಾರ್ಹಃ) ಇಷ್ಟಗಳಾದ ಸಕಲಪದಾರ್ಥಗಳನ್ನು ಪಡೆಯಲಿಕ್ಕೂ ಅರ್ಹನಾದವನು. (ಅರ್ಹಃ) ಸ್ವಾಗತ [ಸುಖಾಗಮನ] ಸುಖಾಸನ, ಶ್ಲಾಘನ, [ಆದರ] ಅರ್ಘ್ಯ, ಪಾದ್ಯ, ಸ್ತುತಿ, ನಮಸ್ಕಾರ ಮುಂತಾದ ಪೂಜಾಸಾಧನಗಳಿಂದ ಪೂಜಿಸಿಕೊಳ್ಳಲು ಅರ್ಹನಾದವನು. (ಪ್ರಿಯಕೃತ್) ಬಗಬಗೆಯಾದ ಪೂಜೆಗಳಿಂದ ಪೂಜಿಸುವ ಭಕ್ತರಿಗೆ ಪ್ರಿಯವಾದುವುಗಳನ್ನೆಲ್ಲ ಕಲ್ಪಿಸುವವನು. (ಪ್ರೀತಿವರ್ಧನಃ) ಭಕ್ತರಪ್ರೀತಿಯನ್ನು ವೃದ್ಧಿಗೊಳಿಸುವವನು. (ವಿಹಾಯಸಗತಿಃ) ಆಕಾಶವನ್ನು ಆಶ್ರಯವನ್ನಾಗಿ ಮಾಡಿಕೊಂಡಿರುವ, ವಾ, ಅಂತರಿಕ್ಷದಲ್ಲಿ ಆದಿತ್ಯರೂಪದಿಂದ ಗಮಿಸುತ್ತಿರುವವನು. (೮೦)

(ಜ್ಯೋತಿಃ) ಸ್ವತಃ ಪ್ರಕಾಶಮಾನನಾದ ಪರಂಜ್ಯೋತಿಸ್ಸ್ವರೂಪನು. (ಸುರುಚಿಃ) ಮಂಗಳಕರವಾದ ಬೆಳಕನ್ನು ಅಥವಾ ಇಚ್ಛೆಯನ್ನು ಹೊಂದಿರುವವನು. (ಹುತಭುಗ್ವಿಭುಃ) ಹುತಭುಕ್ ವಿವಿಧಭಕ್ತರು ವಿವಿಧ ದೇವತೆಗಳ ಉದ್ದೇಶದಿಂದ ಸಮರ್ಪಿಸುವ ಪೂಜಾಸಾಮಗ್ರಿಗಳನ್ನೆಲ್ಲ ಸ್ವೀಕರಿಸುವವನು. (ವಿಭುಃ) ಸ್ವತಂತ್ರ, ಇರತಕ್ಕವನಾಗಿಯೂ ಸರ್ವಸ್ವಾಮಿಯಾಗಿಯೂ ಇರುವವನು. (ರವಿಃ) ಕಿರಣಗಳಿಂದ ಸರ್ವರಸಗಳನ್ನೂ ಸ್ವೀಕರಿಸುತ್ತಿರುವ ರವಿಯೆನಿಸಿದವನು. (ವಿರೋಚನಃ) ಪ್ರಪಂಚದಲ್ಲಿ ವಿವಿಧವಾಗಿ ಬೆಳಗುತ್ತಿರುವವನು. (ಸೂರ್ಯಃ) ಸರ್ವಮನೋರಥಗಳನ್ನು ಕಲ್ಪಿಸುವ, ವಾ, ಜಗತ್ತನ್ನು ಕಲ್ಪಿಸುವವನು. (ಸವಿತಾ) ಸರ್ವಪ್ರಪಂಚಕ್ಕೂ ಮಾತಾಪಿತೃಸ್ವರೂಪನಾಗಿರುವವನು. (ರವಿಲೋಚನಃ) ವಿರಾಡ್ರೂಪದಲ್ಲಿ ಸೂರ್ಯನನ್ನು ನೇತ್ರಸ್ಥಾನವನ್ನಾಗಿ ಮಾಡಿಕೊಂಡಿರುವವನು. (ಅನಂತಹುತಭುಗ್ಭೋಕ್ತಾ) ಅನಂತಃ ಅಳತೆಗೆ ಒಳಗಾಗದವನೂ ಆಗಿರುವುದರಿಂದಲೇ ಅನಂತನೆನಿಸಿರುವ, ವಾ, ಶೇಷಸ್ವರೂಪನಾದ

ಅನಂತ ಹುತಭುಗ್ಭೋಕ್ತಾ ಸುಖದೋ, ನೈಕದೋಽಗ್ರಜಃ । [೯೦]
ಅನಿರ್ವಿಣ್ಣ ಸ್ಸದಾಮರ್ಷೀ ಲೋಕಾಧಿಷ್ಠಾನ ಮದ್ಭುತಃ ॥ ೯೩
ಸನಾ ತ್ಸನಾತನತಮಃ ಕಪಿಲಃ ಕಪಿ ರವ್ಯಯಃ, । [೯೦೦]

---

ವನು, ಹುತಭುಕ್- ಯಜ್ಞದಲ್ಲಿ ಯಜಮಾನನು ಕೊಡುವ ಹವಿಸ್ಸನ್ನು ಅನುಭವಿಸುವವನು. ಭೋಕ್ತಾ- ಭಕ್ತರು ಭಕ್ತಿಯಿಂದ ಸಮರ್ಪಿಸುವುದನ್ನೆಲ್ಲ ಅನುಭವಿಸುವವನು. (ಸುಖದಃ) ಭಕ್ತರಿಗೆ ಮೋಕ್ಷಲಕ್ಷಣವೆನಿಸಿದ ಸುಖವನ್ನು ಅನುಗ್ರಹಿಸುವ, ವಾ, ಭಕ್ತರ ಅಸುಖವನ್ನು ಖಂಡಿಸುವವನು. (೯೦)

(ನೈಕದಃ) ಸಾಧು, ಸತ್ಯ, ಸದ್ಧರ್ಮಗಳ ಸಂರಕ್ಷಣೆಗಾಗಿ ಸಾವಿರಾರುಸಾರಿ ಅವತರಿಸುವವನು. [ನೈಕಜಃ ಎಂದು ಪಾಠಾಂತರ.] (ಅಗ್ರಜಃ) ಹಿರಣ್ಯಗರ್ಭನ ಎಂದರೆ ಚತುರ್ಮುಖನ ರೂಪದಿಂದ ಮೊದಲು ಆವಿರ್ಭವಿಸುವವನು. (ಅನಿರ್ವಿಣ್ಣಃ) ಇಷ್ಟಪ್ರಾಪ್ತಿಗೆ ತಡೆಯಿಲ್ಲದುದರಿಂದಲೇ ಉತ್ಸಾಹಶೂನ್ಯನಾಗದಿರುವವನು. (ಸದಾಮರ್ಷೀ) ಸಾಧುಗಳ ಕೋರಿಕೆಗಳನ್ನೆಲ್ಲ ಕಲ್ಪಿಸಲು ಸಮರ್ಥನಾದವನು (ಲೋಕಾಧಿಷ್ಠಾನಂ) ಮುಕ್ತಾತ್ಮರಿಗೂ ಲೋಕಗಳಿಗೂ ಆಧಾರವಾಗಿ ತಾನು ತನ್ನ ಮಹಿಮೆಯ ಆಧಾರದಲ್ಲಿಯೇ ನೆಲೆಸಿರುವವನು. (ಅದ್ಭುತಃ) ಕೇಳೋಣವೆಂದರೆ ಸಿಕ್ಕದಿರುವ, ಅರಿವಿಗೆ ಗುರಿಯಾಗದ, ಹೇಳುವವರಿಗೆ ಸಿಲುಕದ, ಹೊಂದಲು ಅಲಭ್ಯನೂ ಆದುದರಿಂದಲೇ ಆಶ್ಚರ್ಯರೂಪನೆನಿಸಿರುವವನು, ವಾ, ಸ್ವರೂಪ, ಶಕ್ತಿ ಕಾರ್ಯಗಳಿಂದ ಅದ್ಭುತನಾದವನು. (ಸನಾತ್) ಸರ್ವಕಾಲದಲ್ಲಿಯೂ ನೆಲೆಗೊಂಡಿರುವವನು. (ಸನಾತನತಮಃ) ಪುರಾತನಕಾಲದಿಂದ ನೆಲೆಗೊಂಡಿರುವ ಬ್ರಹ್ಮಾದಿಗಳಿಗೆಲ್ಲ ಮೊದಲನೆಯವನಾಗಿ ಸರ್ವಕಾರಣವೆನಿಸಿದವನು. (ಕಪಿಲಃ) ಬಡಬಾನಲನಂತೆ ಕಪಿಲವರ್ಣವನ್ನು ಹೊಂದಿರುವವನು. (ಕಪಿರವ್ಯಯಃ) ಕಪಿಃ-ಕಪಿ, ಎಂದರೆ ಜಲವನ್ನು ಕಿರಣಗಳಮೂಲಕ ಗ್ರಹಿಸುವ, ವಾ, ಮಹಾವರಾಹರೂಪದಿಂದ ಬೆಳಗುವವನು, ಅವ್ಯಯಃ- ಪ್ರಳಯದಲ್ಲಿ ಸರ್ವಲೋಕಗಳ ಲಯಕ್ಕೂ ಆಕರವಾಗಿರುವವನು. (೯೦೦)

(ಸ್ವಸ್ತಿದಃ) ಭಕ್ತರಿಗೆ ಸಮಸ್ತ ಮಂಗಳಗಳನ್ನುಂಟುಮಾಡುವವನು. (ಸ್ವಸ್ತಿಕೃತ್) ಪರಮಾನಂದಸ್ವರೂಪನಾಗಿರುವುದರಿಂದಲೇ ಪರಮ

ಸ್ವಸ್ತಿದ ಸ್ಸ್ವಸ್ತಿ ಕೃತ್ಸ್ವಸ್ತಿ ಸ್ವಸ್ತಿಭುಕ್ಸ್ವಸ್ತಿದಕ್ಷಿಣಃ ॥ ೯೬
ಅರೌದ್ರಃ ಕುಣ್ಡಲೀ ಚಕ್ರೀ ವಿಕ್ರಮ್ಯೂರ್ಜಿತ ಶಾಸನಃ, । [೧೦]
ಶಬ್ದಾತಿಗ ಶ್ಶಬ್ದಸಹ ಶ್ಶಿಶಿರ ಶ್ಶರ್ವರೀಕರಃ ॥ ೯೭

---

ಮಂಗಳಕರವೆನಿಸಿದ ಸ್ವರೂಪವನ್ನು ಅನುಭವಿಸುತ್ತಿರುವ, ವಾ, ಭಕ್ತರ ನುಭವಿಸುವ ಮಂಗಳಗಳನ್ನು ನೋಡಿ ಆನಂದಿಸುವವನು. (ಸ್ವಸ್ತಿ) ಭಕ್ತವರ್ಗಕ್ಕೆಲ್ಲ ಸಮಸ್ತ ಸ್ವಸ್ತಿ [ಶುಭ] ಗಳನ್ನು ಕೊಡಲಿಕ್ಕೂ ಸಮ ರ್ಥನೆನಿಸಿರುವವನು. (ಸ್ವಸ್ತಿಭುಕ್) ಸ್ಮರಣಮಾತ್ರದಿಂದ ಭಕ್ತರನ್ನು ಸಕಲಕಲ್ಯಾಣಗಳಿಗೂ ಭಾಗಿಗಳನ್ನಾಗಿ ಮಾಡಲು ಸಮರ್ಥನಾದವನು. (ಸ್ವಸ್ತಿದಕ್ಷಿಣಃ) ವಜ್ರದ ಪೆಟ್ಟಿನಿಂದ ಬೆಟ್ಟವು ಒಡೆಯುವಹಾಗೆ ಸ್ಮೃತಿ ಮಾತ್ರದಿಂದ ಭಕ್ತರ ಪಾಪಸಮುದಾಯವನ್ನೆಲ್ಲ ನಾಶಪಡಿಸಿ, ಶುಭಸಂಪದ ಗಳನ್ನು ಕಲ್ಪಿಸುವವನು (ಅರೌದ್ರಃ) ಸರ್ವಕಾಮಸಮೃದ್ಧನಾಗಿರು ವುದರಿಂದ ರೌದ್ರವೆನಿಸಿದ ಪಾಪಕರ್ಮವಾಗಲಿ, ವಿಷಯಾಭಿಲಾಷೆಯಾಗಲಿ ಕೋಪವಾಗಲಿ ಇಲ್ಲದಿರುವವನು. (ಕುಂಡಲೀ) ಶೇಷಸ್ವರೂಪನಾಗಿ ಕುಂಡಲಿ ಎನಿಸಿದ, ವಾ, ಸಾಂಖ್ಯಯೋಗರೂಪಗಳಾದ ಕುಂಡಲಗಳುಳ್ಳವ ನು. (ಚಕ್ರೀ) ವೇಗದಲ್ಲಿ ವಾಯುಸ್ವರೂಪವನ್ನು ಜಯಿಸಿದ ಚಲನಸ್ವರೂ ಪವನ್ನು ಹೊಂದಿರುವ ಮನೋರೂಪವಾದ ಚಕ್ರವನ್ನು ಹಸ್ತದಲ್ಲಿ ಧರಿಸಿ ರುವವನು. (ವಿಕ್ರಮೀ) ಅಶೇಷಪುರುಷರನ್ನೂ ಅತಿಕ್ರಮಿಸಿದ ವಿಕ್ರಮ ಶೌರ್ಯಗಳುಳ್ಳವನು. (ಊರ್ಜಿತಶಾಸನಃ) ಅಡ್ಡಿಯಿಲ್ಲದೆ ನಡೆಯುತ್ತಿರುವ ಶ್ರುತಿ ಸ್ಮೃತಿ ರೂಪವಾದ ಆಜ್ಞೆಗಳುಳ್ಳವನು. (೧೦)

(ಶಬ್ದಾತಿಗಃ) ಸಕಲ ಶಬ್ದಗಳಿಗೂ ಮನಸ್ಸಿಗೂ ಅಗೋಚರನಾದ ವನು. (ಶಬ್ದಸಹಃ) ಕಟ್ಟಕಡೆಯ ತಾತ್ಪರ್ಯದಲ್ಲಿ ಸರ್ವವೇದ ಸ್ಮೃತಿ ಶಬ್ದಗಳಿಗೂ ತಾತ್ಪರ್ಯಸ್ಥಾನವೆನಿಸಿರುವವನು. (ಶಿಶಿರಃ) ತಾಪತ್ರಯ ದಿಂದ ತಪ್ತರಾದವರಿಗೆ ಸರ್ವಸಂತಾಪ ಪರಿಹಾರಕನಾಗಿರುವುದರಿಂದ ಶಿಶಿ ರನೆನಿಸಿರುವನು. (ಶರ್ವರೀಕರಃ) ಸಂಸಾರಿಗಳಿಗೆ ತೋರಿಬರದಿರುವುದ ರಿಂದ ಆತ್ಮನು, ಶರ್ವರೀ [ಕತ್ತಲೆ], ಜ್ಞಾನಿಗಳಿಗೆ ಸಂಸಾರವು ಶರ್ವರೀ, [ತೋರುವುದಿಲ್ಲ], ಆದಕಾರಣ ಆ ಉಭಯರಿಗೂ ಆ ಉಭಯಶರ್ವರಿಗಳ ನ್ನೂ ಕಲ್ಪಿಸುವವನು. (ಅಕ್ರೂರಃ) ಅವಾಪ್ತಸರ್ವಕಾಮನಾಗಿರುವುದ ರಿಂದಲೇ ಕಾಮಭಂಗದಿಂದುಂಟಾಗುವ ಕೋಪವನ್ನೂ, ಆ ಕೋಪದಿಂ

ಅಕ್ರೂರಃ ಪೇಶಲೋ ದಕ್ಷೋ ದಕ್ಷಿಣಃ ಕ್ಷಮಿಣಾಂ ವರಃ ।
ವಿದ್ವತ್ತಮೋ, ವೀತಭಯಃ ಪುಣ್ಯಶ್ರವಣ ಕೀರ್ತನಃ ॥೯೭ [೨೦]

---

ದುಂಟಾಗುವ ಕ್ರೌರ್ಯವನ್ನು ಹೊಂದದಿರುವವನು. (ಪೇಶಲಃ) ಕರ್ಮ, ಮನಸ್ಸು, ವಾಕ್ಕು, ಶರೀರ ಇವುಗಳೆಲ್ಲವುಗಳಿಂದಲೂ ಸುಂದರನಾಗಿರುವವನು. (ದಕ್ಷಃ) ವೃದ್ಧಿ, ಶಕ್ತಿ, ಶೀಘ್ರಕಾರಿತ್ವ, ಈಮೂರರಿಂದಲೂ ಸಮರ್ಥನಾದವನು. (ದಕ್ಷಿಣಃ) ಸುಖಾನುಭವದಲ್ಲಿಯೂ ಸುಖಪಡಿಸುವುದರಲ್ಲಿಯೂ ಸಮರ್ಥನೆನಿಸಿದ, ವಾ, ವಿಘ್ನಗಳನ್ನು ತೊಲಗಿಸುವವನು. (ಕ್ಷಮಿಣಾಂವರಃ) ಭಾರವನ್ನುಹೊರುವ ಭೂಮಿ ಮೊದಲಾದುವುಗಳಿಗಿಂತಲೂ, ಯೋಗನಿರತರಾದ ಯೋಗಿಗಳಿಗಿಂತಲೂ ಕ್ಷಮಾವಂತನಾದ, ವಾ, ಶಕ್ತಿವಂತರಿಗೆಲ್ಲ ಶಕ್ತನಾದವನು. (ವಿದ್ವತ್ತಮಃ) ಸರ್ವದಾಸರ್ವವಿಷಯಕವಾದ ಜ್ಞಾನದಿಂದ ಬೆಳಗುತ್ತಿರುವವನು. (೨೦)

(ವೀತಭಯಃ) ಸರ್ವೇಶ್ವರನೂ, ನಿತ್ಯಮುಕ್ತನೂ, ಆಗಿರುವುದರಿಂದ ಸಂಸಾರರೂಪವಾದ, ಅಥವಾ ಸಂಸಾರದಿಂದುಂಟಾಗುವ ಭಯವನ್ನು ಹೊಂದದಿರುವವನು. (ಪುಣ್ಯಶ್ರವಣಕೀರ್ತನಃ) ಚರಿತ್ರಶ್ರವಣದಿಂದಲೂ ನಾಮಸ್ಮರಣೆಯಿಂದಲೂ ಪವಿತ್ರತೆಯನ್ನುಂಟುಮಾಡುವವನು. (ಉತ್ತಾರಣಃ) ಸಂಸಾರಸಾಗರದಿಂದ ದಾಟಿಸುವವನು. (ದುಷ್ಕೃತಿಹಾ) ಭಕ್ತರ ದುಷ್ಕರ್ಮಗಳನ್ನೆಲ್ಲ ಧ್ವಂಸಮಾಡುವವನು. (ಪುಣ್ಯಃ) ಭಜನ, ಸ್ಮರಣಾದಿಗಳನ್ನು ಆಚರಿಸುವವರಿಗೆ ಸುಕೃತವನ್ನು ಕಲ್ಪಿಸುವ, ವಾ, ಶ್ರುತಿಸ್ಮೃತಿರೂಪವಾಗಿರುವ ವಾಕ್ಕಿನಿಂದ ಭಕ್ತರಿಗೆ ಶುಭವನ್ನುಪದೇಶಿಸುವವನು. (ದುಸ್ವಪ್ನನಾಶನಃ) ಮುಂದೆ ಬರುವ ಕೇಡುಗಳನ್ನು ಸೂಚಿಸುವ ದುಸ್ವಪ್ನಗಳನ್ನುನಾಶಗೊಳಿಸುವವನು. (ವೀರಹಾ) ಭಕ್ತರ ದುರ್ಗತಿಗಳನ್ನೆಲ್ಲ ಧ್ವಂಸಮಾಡಿ ಸದ್ಗತಿಯನ್ನು ಕಲ್ಪಿಸುವವನು. (ರಕ್ಷಣಃ) ಸತ್ವಗುಣವನ್ನವಲಂಬಿಸಿ ಮೂಜಗವನ್ನು ಸಂರಕ್ಷಿಸುವವನು. (ಸನ್ತಃ) ಸಾಧುಗಳ ವಿದ್ಯಾವಿನಯಾದಿ ವೃದ್ಧಿಗೋಸ್ಕರ ಸದ್ರೂಪದಿಂದಿರುವವನು. (ಜೀವನಃ) ಸರ್ವಪ್ರಾಣಿಗಳ ಜೀವನಾಧಾರವಾದ ಪ್ರಾಣದರೂಪದಿಂದಿರುವವನು.

(ಪರ್ಯವಸ್ಥಿತಃ) ಜಗತ್ತಿನಲ್ಲೆಲ್ಲ ನೆಲೆಗೊಂಡಿರುವವನು. (ಅನಂತರೂಪಃ) ಜಗತ್ತಿನಲ್ಲಿ ವಿಚಿತ್ರಗಳಾದ ನಾನಾರೂಪಗಳನ್ನು ತಾಳಿ ಬೆಳಗು

ಉತ್ತಾರಣೋ ದುಷ್ಕೃತಿಹಾ ಪುಣ್ಯೋ ದುಸ್ಸ್ವಪ್ನನಾಶನಃ ।
ವೀರಹಾ ರಕ್ಷಣಃ ಸನ್ತೋ ಜೀವನಃ, ಪರ್ಯವಸ್ಥಿತಃ ॥ ೯೯ [೩೦]
ಅನಂತರೂಪೋ ನನ್ತಶ್ರೀ ರ್ಜಿತಮನ್ಯು ಭ್ರಯಾಪಹಃ ।
ಚತುರಶ್ರೋ ಗಭೀರಾತ್ಮಾ ವಿದಿಶೋ ವ್ಯಾದಿಶೋ ದಿಶಃ, ॥ ೧೦೦ [೪೦

ವವನು. (ಅನಂತಶ್ರೀಃ) ಅಪರಿಮಿತಗಳಾದ ಶಕ್ತಿಸಂಪದಗಳನ್ನೊಳಗೊಂಡಿರುವವನು. (ಜಿತಮನ್ಯುಃ) ಕ್ರೋಧವನ್ನೆಲ್ಲ ಜಯಿಸಿರುವವನು (ಭಯಾಪಹಃ) ಭಕ್ತರಿಗೆ ಸಂಸಾರದಲ್ಲಿನ ಭಯಗಳನ್ನೆಲ್ಲ ನಾಶಗೊಳಿಸುವವನು. (ಚತುರಶ್ರಃ) ಸಂಸಾರಿಗಳಿಗೆ ಉಚಿತಫಲಪ್ರದಾನದಲ್ಲಿ ಸರ್ವನ್ಯಾಯಸಂಪನ್ನನಾಗಿರುವವನು. (ಗಭೀರಾತ್ಮಾ) ಅಳೆಯಲಸದಳವೆನಿಸಿದ [ಪರಿಮಿತಿಗೊಳಗಾಗದ] ಚಿತ್ತಸ್ವರೂಪವುಳ್ಳವನು. (ವಿದಿಶಃ) ಭಕ್ತರಿಗೆ ಫಲವಿಶೇಷಗಳನ್ನು ಕಲ್ಪಿಸುವವನು. (ವ್ಯಾದಿಶಃ) ಇಂದ್ರ, ವರುಣ ಮೊದಲಾದವರಿಗೆ ವಿವಿಧವಾದ ಆಜ್ಞೆಗಳನ್ನು ವಿಧಿಸುವವನು. (ದಿಶಃ) ವಿವಿಧಕರ್ಮಗಳಿಗೂ ವಿಚಿತ್ರ ವಿವಿಧಫಲಗಳನ್ನು ವೇದಸ್ವರೂಪದಿಂದ ಸೂಚಿಸುವವನು. (೪೦)

(ಅನಾದಿಃ) ಬೇರೊಂದು ಮೂಲಕಾರಣದಿಂದ ಉಂಟಾಗದಿರುವವನು. (ಭೂರ್ಭುವಃ) ಸರ್ವಭುವನಕ್ಕೂ ಆಧಾರವೆನಿಸಿರುವವನು, ವಾ, ಸರ್ವಭೂತಾಶ್ರಯವೆನಿಸಿದ ಭೂಮಿಗೂ ಆಶ್ರಯನಾದವನು. (ಲಕ್ಷ್ಮೀಃ) ಭೂಮಿ,ಭೂವ್ಯಾಧಾರವು ಮಾತ್ರವಲ್ಲದೆ ಸರ್ವಸಂಪದ್ರೂಪನಾಗಿರುವ,ವಾ, ಆತ್ಮವಿದ್ಯಾಸ್ವರೂಪನಾದ, ವಾ, ಭೂರ್ಭುವರ್ಲೋಕಗಳಿಗೂ ಶೋಭೆಯನ್ನುಂಟುಮಾಡುವವನು. (ಸುವೀರಃ) ವಿವಿಧಮಾರ್ಗಗಳನ್ನೊಳಗೊಂಡಿರುವ, ವಾ, ಸಾಧುಗಳನ್ನು ಸನ್ಮಾರ್ಗದಲ್ಲಿ ಪ್ರೇರಿಸುವವನು. (ರುಚಿರಾಂಗದಃ) ರಮಣೀಯಗಳಾದ ಭುಜಕೀರ್ತಿಗಳೆಂಬ ಮಂಗಳಾಭರಣಗಳುಳ್ಳವನು. (ಜನನಃ) ಜಂತುಗಳನ್ನೆಲ್ಲ ಉಂಟುಮಾಡುವವನು. (ಜನಜನ್ಮಾದಿಃ) ಜನ್ಮವನ್ನು ಪಡೆಯುವ ಜನರ ಜನ್ಮಕ್ಕೆ ಮೂಲಕಾರಣನಾದವನು. (ಭೀಮಃ) ದುಷ್ಟರಿಗೆ ಭಯವನ್ನು ಕಲ್ಪಿಸಲು ಮೂಲಕಾರಣನಾದವನು. (ಭೀಮಪರಾಕ್ರಮಃ) ಅಸುರರಿಗೆ ಭಯವನ್ನು ಕಲ್ಪಿಸುವ ಭಯಂಕರಪರಾಕ್ರಮವುಳ್ಳವನು. (ಆಧಾರನಿಲಯಃ) ಪೃಥಿವ್ಯಾದಿ ಪಂಚಭೂತಗಳಿಗೂ ಆಧಾರಗಳಾದ ರೂಪರಸಾದಿ ಭೂತ ಸೂಕ್ಷ್ಮಗಳಿಗೂ ಆಧಾರವೆ

ಅನಾಪಿ ಭರ್ಭುವೋಲಕ್ಷ್ಮೀಃ ಸುವೀರೋ ರುಚಿರಾಙ್ಗದಃ ।
ಜನನೋ ಜನಜನ್ಮಾದಿ ರ್ಭೀಮೋ ಭೀಮಪರಾಕ್ರಮಃ ॥ ೧೦೧
ಆಧಾರನಿಲಯೋ, ಧಾತಾ ಪುಷ್ಪಹಾಸಃ ಪ್ರಜಾಗರಃ । [೫೦]
ಊರ್ಧ್ವಗ ಸ್ಸತ್ಪಥಾಚಾರಃ ಪ್ರಾಣದಃ ಪ್ರಣವಃ ಪಣಃ ॥ ೧೦೨
ಪ್ರಮಾಣಂ ಪ್ರಾಣನಿಲಯಃ, ಪ್ರಾಣಭೃ ತ್ಪ್ರಾಣಜೀವನಃ । [೬೦]

---

ನಿಸಿದ, ವಾ, ಬೇರೊಂದು ಆಧಾರವಿಲ್ಲದೆ ಸ್ವಮಹಿಮೆಯಲ್ಲಿ ನೆಲೆಗೊಂಡು ಸರ್ವಾಧಾರವೆನಿಸಿದವನು. (೫೦)

(ಧಾತಾ) ಸಂಹಾರಸಮಯದಲ್ಲಿ ಸರ್ವಪ್ರಜೆಗಳನ್ನೂ [ಪಾನಮಾಡುವ] ಧರಿಸುವ, ವಾ, ಬೇರೊಂದು ಆಧಾರವಿಲ್ಲದ ಎಂದರೆ ತನಗೆ ತಾನೇ ಆಧಾರನಾಗಿರುವವನು. (ಪುಷ್ಪಹಾಸಃ) ಅರಳುತ್ತಿರುವ ಹೂವಿನಂತೆ ಮಂದಹಾಸವುಳ್ಳ, ವಾ, ಗಿಡದಲ್ಲಿ ಮೊಗ್ಗು ಅರಳುವ ಸ್ಥಿತಿಯನ್ನು ಹೊಂದುವಹಾಗೆ ಪ್ರಳಯಕಾಲದೊಳಗೆ ಸ್ವಾತ್ಮದಲ್ಲಿ ಮುಕುಳ [ಮೊಗ್ಗು] ದ ರೂಪದಿಂದ ಅಡಗಿದ್ದ ಪ್ರಪಂಚವನ್ನು ಮರಳಿ ಸೃಷ್ಟಿಸಮಯದಲ್ಲಿ ಅರಳಿದ ಹೂವಿನಂತೆ ಸೃಷ್ಟಿಸಿ ಪ್ರಕಾಶಗೊಳಿಸುವವನು (ಪ್ರಜಾಗರಃ) ಪ್ರಪಂಚ ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳಲ್ಲಿ ಯಾವಾಗಲೂ ಜಾಗರೂಕತೆಯಿಂದಿರುವವನು. (ಊರ್ಧ್ವಗಃ) ಸರ್ವಪ್ರಪಂಚದ ಊರ್ಧ್ವಭಾಗದಲ್ಲಿರುವವನು. (ಸತ್ಪಥಾಚಾರಃ) ಸಾಧುಗಳ ಆಚರಣೆಯನ್ನು ಆಚರಿಸಿ ತೋರಿಸುವವನು. (ಪ್ರಾಣದಃ) ಅಶ್ವತ್ಥಾಮನ ಅಸ್ತ್ರಪ್ರಯೋಗದಿಂದ ಗರ್ಭದಲ್ಲಿಯೆ ಮೃತನಾಗತ್ತಿದ್ದ ಪರೀಕ್ಷಿತ್ತಿಗೂ, ಸಾಂದೀಪನೆಂಬ ವಿದ್ಯಾಗುರುವಿನ ಪುತ್ರನಿಗೂ, ಶಂಬೂಕ ಸಂಹಾರದಿಂದ ಬ್ರಾಹ್ಮಣಪುತ್ರನಿಗೂ ಪ್ರಾಣದಾನವನ್ನು ಮಾಡಿದವನು. (ಪ್ರಣವಃ) ಸ್ಮರಣಮಾತ್ರದಿಂದ ಸರ್ವಪಾಪವನ್ನೂ ಪರಿಹರಿಸುವವನು (ಪಣಃ) ನಾಮರೂಪಾತ್ಮಕವಾದ ಸಮಸ್ತಪ್ರಪಂಚವನ್ನು ಸೃಷ್ಟಿಸಿ ಅದರ ವ್ಯವಹಾರವನ್ನೆಲ್ಲ ನಿರ್ವಹಿಸುವ, ವಾ, ಪುಣ್ಯಕರ್ಮಾನುಸಾರ ಅಧಿಕಾರಿಗಳಿಗೆ ಫಲಗಳನ್ನು ಹಂಚುವವನು. (ಪ್ರಮಾಣಂ) ಸ್ವತಃ ಪ್ರಕಾಶಮಾನವಾದ ಪ್ರಜ್ಞೆಯರೂಪವಾಗಿರುವವನು (ಪ್ರಾಣನಿಲಯಃ) ಇಂದ್ರಿಯಗಳೆಲ್ಲ ಲಯವನ್ನು ಹೊಂದತಕ್ಕಸ್ಥಾನವಾಗಿರುವ, ವಾ, ಪ್ರಾಣಾಪಾನಾದಿ ವಾಯುಗಳಿಗೆಲ್ಲ ಆಸರೆಯಾಗಿರುವ, ವಾ, ಪ್ರಾಣಗಳೂ, ಜೀವರುಗಳೂ ಲಯವನ್ನು ಹೊಂದಲು ಸ್ಥಾನನಾದವನು. (೬೦)

ತತ್ವಂ ತತ್ವವಿ ದೇಕಾತ್ಮಾ ಜನ್ಮ ಮೃತ್ಯು ಜರಾತಿಗಃ || ೧೦೩
ಭೂರ್ಭುವ ಸ್ಸ್ವಸ್ತರು ಸ್ತಾರ ಸ್ಸವಿತಾ ಪ್ರಪಿತಾಮಹಃ, | [೭೦]
ಯಜ್ಞೋ ಯಜ್ಞಪತಿ ರ್ಯಜ್ವಾ ಯಜ್ಞಾಂಗೋ ಯಜ್ಞವಾಹನಃ ||

---

(ಪ್ರಾಣಭೃತ್) ಅನ್ನರೂಪದಿಂದಿರುತ್ತಾ ಪ್ರಾಣಗಳನ್ನು ಪೋಷಿಸುವವನು (ಪ್ರಾಣಜೀವನಃ) ಪ್ರಾಣಿಗಳನ್ನು ಪ್ರಾಣವಾಯುಗಳಿಂದ ಜೀವಿಸುವಂತೆ ಮಾಡುವವನು. (ತತ್ವಂ) ಪರಮಾರ್ಥ ಸತ್ಯಸ್ವರೂಪನಾಗಿರುವವನು. (ತತ್ವವಿತ್) ಸರ್ವಪ್ರಪಂಚದ ಯಥಾರ್ಥತತ್ವವನ್ನು ಅರಿಯುವವನು. (ಏಕಾತ್ಮಾ) ಅದ್ವಿತೀಯಾತ್ಮನಾಗಿರುವ ಎಂದರೆ ಜಾಗ್ರತ್ತಿನಲ್ಲಿ ಸರ್ವವ್ಯವಹಾರದಲ್ಲಿ ಪ್ರವರ್ತಿಸುವ, ಸ್ವಪ್ನದಲ್ಲಿ ಸಂಸ್ಕಾರರೂಪದಿಂದ ವ್ಯವಹಾರವನ್ನು ಸ್ವೀಕರಿಸುವ, ಸುಷುಪ್ತಿಯಲ್ಲಿ ಎಲ್ಲವನ್ನೂ ಅಡಗಿಸಿಕೊಂಡು ಏಕರೂಪದಿಂದಿರುವವನು. (ಜನ್ಮಮೃತ್ಯುಜರಾತಿಗಃ) ಇದಾನೆ, ಹುಟ್ಟುತ್ತಾನೆ, ಬೆಳೆಯುತ್ತಾನೆ. ರೂಪಾಂತರವನ್ನು ಪಡೆಯುತ್ತಾನೆ, ಬಡವಾಗುತ್ತಾನೆ, ನಶಿಸುತ್ತಾನೆ ಎಂಬ ಆರು ಬಗೆಯಾದ ಭಾವವಿಕಾರಗಳಿಲ್ಲದೆ ಇರುವುದರಿಂದಲೇ,ಜನ್ಮ, ಮೃತ್ಯು,ಜರೆ ಇವುಗಳನ್ನು ಅತಿಕ್ರಮಿಸಿರುವವನು. (ಭೂರ್ಭುವಸ್ಸ್ವಸ್ತರುಃ) ಯಜ್ಞದಲ್ಲಿ ಯಜಮಾನರೂಪದಿಂದಿರುತ್ತಾ ವೇದಸಾರಗಳಾದ ಭೂಃ, ಭುವಃ, ಸ್ವಃ ಎಂಬ ವ್ಯಾಹೃತಿಗಳಿಂದ ಹೋಮಮಾಡಿ ಆದಿತ್ಯನನ್ನು ಹೊಂದಿದ ಆ ವ್ಯಾಹೃತಿಗಳನ್ನೇ ವೃಷ್ಟಿರೂಪದಿಂದ ಪರಿಣಮಿಸುವಂತೆ ಮಾಡಿ, ಪ್ರಪಂಚಕ್ಕೆ ಅನ್ನವನ್ನು ಕಲ್ಪಿಸಿ ಪಾಲಿಸುವ, ಮಾ, ಬುಡ, ತಾಳು, ಅಗ್ರಗಳಂತಿರುವ ಭೂಃ, ಭುವಃ, ಸ್ವಃ ಎಂಬ ಅವಯವಗಳಿಂದ ವೃಕ್ಷರೂಪವಾಗಿರುವವನು. (ತಾರಃ) ಸಂಸಾರಸಾಗರದಿಂದ ಪ್ರಾಣಿಗಳನ್ನು ದಾಟಿಸುವ, ಮಾ, ಪ್ರಣವಸ್ವರೂಪನಾದವನು. (ಸವಿತಾ) ಸರ್ವಪ್ರಪಂಚವನ್ನು ಸೃಷ್ಟಿಸುವವನು. (ಪ್ರಪಿತಾಮಹಃ) ಸರ್ವಜಗತ್ತಿಗೂ ಪಿತಾಮಹನಾದ ಬ್ರಹ್ಮನಿಗೂ ತಂದೆಯಾಗಿ ಪ್ರಪಿತಾಮಹನೆನಿಸಿದವನು. (೭೦)

(ಯಜ್ಞಃ) ಸರ್ವಯಜ್ಞಸ್ವರೂಪನಾಗಿರುವವನು. (ಯಜ್ಞಪತಿಃ) ಯಜ್ಞಗಳನ್ನೆಲ್ಲ ಆಚರಿಸುವ ಯಜಮಾನರೂಪದಿಂದಿರುವವನು (ಯಜ್ವಾ) ಯಜ್ಞಸ್ವಾಮಿಯಾಗಿ ಯಜ್ಞಫಲಗಳನ್ನು ಅನುಭವಿಸುವವನು (ಯಜ್ಞಾಂಗಃ) ಯಜ್ಞಾಂಗರೂಪನಾಗಿ ವರಾಹಮೂರ್ತಿಯೆನಿಸಿದ, ಎಂದರೆ-ವೇದವೇ

ಯಜ್ಞಭೃದ್ಯಜ್ಞಕೃದ್ಯಜ್ಞೀ ಯಜ್ಞಭುಗ್ಯಜ್ಞಸಾಧನಃ । [೯೦]
ಯಜ್ಞಾಂತಕೃದ್ಯಜ್ಞಗುಹ್ಯ ಮನ್ನ ಮನ್ನಾದ ಏವ ಚ ॥ ೧೦೪

ಪಾದ, ಯೂಪವು ಕೋರೆಹಲ್ಲು, ವಸಂತಾದಿಋತುವು ಹಸ್ತ, ಕುಂಡವೇ ಮುಖವು, ಅಗ್ನಿಯು ನಾಲಿಗೆ, ದರ್ಭೆಯು ರೋಮ; ಬ್ರಹ್ಮನು ತಲೆ, ಅಹೋರಾತ್ರಿಗಳೇ ದೃಷ್ಟಿಗಳು, ವೇದಾಂಗಗಳೇ ಕರ್ಣಾಭರಣ, ಆಜ್ಯವು ಮೂಗು, ಸ್ರುವವು ಬಾಯಿ, ಸಾಮಘೋಷವು ಧ್ವನಿ, ಸತ್ಯಧರ್ಮಗಳೇ ಸ್ವರೂಪ, ವಿಧಿವಿಧಾನವೇ ಪಾದನ್ಯಾಸ, ಪ್ರಾಯಶ್ಚಿತ್ತ ಉಗುರು, ಪಶುವು ಕಣಕಾಲು, ಉದ್ಗಾತೃವು ಕರುಳು, ಹೋತೃವು ಮರ್ಮಸ್ಥಾನವು, ಮೂಲಿಕೆಯು ಬೀಜವು, ಮಂತ್ರವು ಗುದಸ್ಥಾನ, ಸೋಮರಸವುಶೋಣಿತ, ವೇದಿಯು ಹೆಗಲು, ಹವಿಸ್ಸು ವಾಸನೆ, ಹವ್ಯಕವ್ಯಗಳೇ ವೇಗ, ಪ್ರಾಗ್ವಂಶವು ಶರೀರ, ಬಗೆಬಗೆಯ ದೀಕ್ಷೆಗಳು ಅರ್ಚನೆ, ದಕ್ಷಿಣೆಯು ಹೃದಯವು, ಮಹಾಸತ್ರವೇ ಆಕೃತಿ, ಉಪಾಕರ್ಮವು ತುಟಿ, ಪ್ರವರ್ಗ್ಯವು ಭೂಷಣ, ನಾನಾಛಂದಸ್ಸುಗಳೇ ಗಮನಮಾರ್ಗ, ಉಪನಿಷತ್ತು ಆಸನ, ಛಾಯಾರೂಪವೇ ಪತ್ನಿ, ಈರೂಪದಿಂದಿರುವವನು. (ಯಜ್ಞವಾಹನಃ) ಫಲಸಾಧಕಗಳಾದ ಯಜ್ಞಗಳನ್ನು ನೆರವೇರಿಸುವವನು. (ಯಜ್ಞಭೃತ್) ಯಜ್ಞರಕ್ಷಕನಾದವನು. (ಯಜ್ಞಕೃತ್) ಜಗದಾದಿಯಲ್ಲಿ ಯಜ್ಞಕರ್ತೃವಾಗಿಯೂ, ಜಗದಂತ್ಯದಲ್ಲಿ ಯಜ್ಞವನ್ನು ಕತ್ತರಿಸುವವನಾಗಿಯೂ ಇರುವವನು. (ಯಜ್ಞೀ) ಯಜ್ಞದಲ್ಲಿ ಆಚರಿಸುವ ಅರ್ಚನೆಗಳಿಗೆಲ್ಲ ಆಶ್ರಯನಾದವನು. (ಯಜ್ಞಭುಕ್) ಯಜ್ಞವನ್ನು ಪಾಲಿಸಿ ಅದರ ಫಲವನ್ನು ಅನುಭವಿಸುವವನು. (ಯಜ್ಞಸಾಧನಃ) ಯಜ್ಞಕ್ಕೆ ಬೇಕಾದ ಸಲಕರಣೆಗಳನ್ನು ಕಲ್ಪಿಸುವವನು. (೯೦)

(ಯಜ್ಞಾಂತಕೃತ್) ಯಜ್ಞದಕಡೆಯಲ್ಲಿ ಉಂಟಾಗುವ ಅಪೂರ್ವವೆಂಬ ಧರ್ಮವನ್ನೂ, ಅದರ ಫಲವಾದ ಸ್ವರ್ಗಾದಿಸುಖವನ್ನೂ ಕಲ್ಪಿಸುವವನು. (ಯಜ್ಞಗುಹ್ಯಂ) ಯಜ್ಞಗಳೊಳಗೆಲ್ಲ ರಹಸ್ಯವಾದ ಬ್ರಹ್ಮಯಜ್ಞಸ್ವರೂಪವಾಗಿರುವವನು. (ಅನ್ನಂ) ಭೂತಗಳಿಗೆ ಆಧಾರವಾಗಿಯೂ, ಭೂತಗಳನ್ನು ಆಹಾರಮಾಡಿಕೊಳ್ಳುವವನಾಗಿಯೂ ಇರುವವನು. (ಅನ್ನಾದಃ) ಯಜ್ಞಗಳನ್ನೂ, ಯಜ್ಞಕರ್ತೃಗಳನ್ನೂ, ಗ್ರಹಿಸುವವನು. (ಆತ್ಮಯೋನಿಃ) ಜೀವರುಗಳಿಗೆಲ್ಲ ತಾನೇಕಾರಣನಾಗಿರುವುದರಿಂದ ಘಟಪಟಾದಿಗಳೆಲ್ಲ ತಮಗೆ ಕಾರಣವಾದ ಮಣ್ಣಿನಲ್ಲಿ ಲಯವಾಗುವಹಾಗೆ, ಆ ಜೀವರು

ಅತ್ರಿಯೋನಿ ಸ್ಸ್ವಯಂಜಾತೋ ವೈಖಾನ ಸ್ಸಾಮಗಾಯನಃ ।
ದೇವಕೀ ನನ್ದನ ಸ್ಸ್ರಷ್ಟಾ, ಕ್ಷಿತೀಶಃ ಪಾಪನಾಶನಃ ॥ ೧೦೬ [೯೦]
ಶಙ್ಖಭೃ ನ್ನಂದಕೀ ಚಕ್ರೀ ಶಾರ್ಙ್ಗಧನ್ವಾ ಗದಾಧರಃ ।

---

ಗಳಿಗೂ ಮುಕ್ತಿದೆಶೆಯಲ್ಲಿ ತಾನೇ ಲಯಸ್ಥಾನವಾಗಿರುವವನು, ವಾ, ಸರ್ವ ಕಾರಣನು. (ಸ್ವಯಂಜಾತಃ) ತನಗೆ ತಾನೇ ಕಾರಣನು ಎನಿಸಿಕೊಂಡಿರುವವನು (ವೈಖಾನಃ) ಭೂಮಿಯನ್ನು ತೋಡಿ ವರಾಹರೂಪವನ್ನು ತಾಳಿ ಹಿರಣ್ಯಾಕ್ಷನನ್ನು ನಾಶಪಡಿಸಿದವನು. (ಸಾಮಗಾಯನಃ) ಸಾಮಗಾನ ಲೋಲನಾದವನು. (ದೇವಕೀನಂದನಃ) ತೇಜಃಪದಾರ್ಥಗಳು, ವೀರ್ಯವತ್ತಾದ ಪದಾರ್ಥಗಳು, ಮೂರುಲೋಕಗಳು, ಲೋಕಪಾಲರು, ಮೂರು ವೇದಗಳು ಆಹವನೀಯಾದಿ ಮೂರು ಅಗ್ನಿಗಳು, ಆಹುತಿಗಳು, ಸಮಸ್ತ ದೇವತೆಗಳು ಇವೆಲ್ಲವೂ ದೇವಕೀನಂದನನೇ ಎನಿಸಿರುವವನು. (ಸ್ರಷ್ಟಾ) ಸರ್ವಲೋಕಗಳಿಗೂ ಸೃಷ್ಟಿಕರ್ತನಾದವನು. (೯೦)

(ಕ್ಷಿತೀಶಃ) ದಶರಥಪುತ್ರಾದಿ ರೂಪದಿಂದ ಭೂಪತಿಯಾಗಿ ಸಾನ್ನಿಧ್ಯವನ್ನು ತೋರಿ ಲೋಕವನ್ನು ರಕ್ಷಿಸುವವನು. (ಪಾಪನಾಶನಃ) ನಾಮಸ್ಮರಣೆ, ಅರ್ಚನೆ, ಧ್ಯಾನ, ಸ್ಮರಣೆ, ಇತ್ಯಾದಿಗಳಿಂದ ಪಾಪರಾಶಿಯನ್ನು ನಾಶಗೊಳಿಸುವ, ಎಂದರೆ-ಪಕ್ಷೋಪವಾಸದಿಂದ ಪರಿಹರವಾಗುವ ಪುರುಷನಪಾಪವು ನೂರು ಪ್ರಾಣಾಯಾಮದಿಂದ ನಶಿಸುವುದು, ಅಂತಹ ಪಾಪವು ಶ್ರೀಹರಿಯ ಧ್ಯಾನದಿಂದ ನಿಮಿಷಮಾತ್ರದಲ್ಲಿ ನಶಿಸುವುದು, ಅಂತಹ ಮಹಿಮೆಯುಳ್ಳವನು. (ಶಂಖಭೃತ್) ಭೂತಗಳ ಅಹಂಕಾರರೂಪವಾಗಿರುವ ಶಂಖವನ್ನು ಧರಿಸಿರುವವನು. (ನಂದಕೀ) ಸಕಲ ದುರಿತರಾಶಿಯನ್ನು ಕತ್ತರಿಸಿ ಆನಂದವನ್ನುಂಟುಮಾಡುವ ಬ್ರಹ್ಮವಿದ್ಯಾಮಯವಾದ ನಂದಕವೆಂಬ ಖಡ್ಗವನ್ನು ಧರಿಸಿರುವವನು. (ಚಕ್ರೀ) ಮನಸ್ತತ್ವರೂಪವಾಗಿರುವ ಸುದರ್ಶನವೆಂಬ ಚಕ್ರವನ್ನು ಧರಿಸಿರುವ, ವಾ, ಸಂಸಾರವೆಂಬ ಚಕ್ರವನ್ನು ಆಜ್ಞಾಮಾತ್ರದಿಂದ ನಡೆಸುವವನು. (ಶಾರ್ಙ್ಗಧನ್ವಾ) ಇಂದ್ರಿಯಗಳ ಅಹಂಕಾರವನ್ನು ತಗ್ಗಿಸುವ ಶಕ್ತಿಯ ರೂಪವಾದ ಶಾರ್ಙ್ಗವೆಂಬ ಬಿಲ್ಲನ್ನು ಹಿಡಿದಿರುವವನು. (ಗದಾಧರಃ) ಸ್ವಾತ್ಮಪ್ರಕಾಶವನ್ನುಂಟುಮಾಡುವ ಬುದ್ಧಿತತ್ವರೂಪವಾದ ಗದೆಯನ್ನು ಧರಿಸಿ ಇರತಕ್ಕವನು.

ರಥಾಙ್ಗಪಾಣಿ ರಕ್ಷೋಭ್ಯಃ ಸ್ಸರ್ವಪ್ರಹರಣಾಯುಧಃ, ॥ [೧೦೦೦]
ಸರ್ವಪ್ರಹರಣಾಯುಧ ಓಂ ನಮಃ ಇತಿ ॥೧೦೭

(ರಥಾಂಗಪಾಣಿಃ) ರಥಾಂಗವೆಂಬ ಚಕ್ರಾಯುಧವನ್ನು ಪಾಣಿಯಲ್ಲಿ ಧರಿಸಿರುವವನು (ಅಕ್ಷೋಭ್ಯಃ) ಅನೇಕಾಯುಧಪಾಣಿಯಾಗಿರುವುದರಿಂದಲೇ ಯಾರಿಂದಲೂ ಇದಿರಿಸಲಸಾಧ್ಯನೆನಿಸಿರುವವನು. (ಸರ್ವಪ್ರಹರಣಾಯುಧಃ) ಲೆಕ್ಕದಿಂದ ಗೊತ್ತು ಮಾಡಲಾಗದ ಆಯುಧಗಳನ್ನು ಧರಿಸಿ ಇರತಕ್ಕವನು. (೧೦೦೦)

ಸರ್ವಜ್ಞನು, ಸರ್ವಶಕ್ತನು, ಸರ್ವಮಂಗಳಸ್ವರೂಪನೂ ಆಗಿರುವುದರಿಂದಲೇ ತಾನು ಇಚ್ಛಾಮಾತ್ರದಿಂದ ಸೃಷ್ಟಿಸಿರುವ ಸಮಸ್ತವೂ ಸರ್ವಕಾಲದಲ್ಲಿಯೂ ಸರ್ವತೋಮುಖವಾಗಿ ತನಿಗೆ ಆಯುಧಗಳಾಗಿರುವುದರಿಂದ ಓಂಕಾರಸ್ವರೂಪನಾಗಿರುವ ಆತನಿಗೆ ನಾಮಸಪಪ್ರಾರಾಯಣದ ಮೂಲಕ ಶ್ರದ್ಧಾಭಕ್ತಿಗಳಿಂದೊಡಗೂಡಿ ವಂದನೆಯನ್ನು ಸಮರ್ಪಿಸಿದರೆ ಸಕಲದುರಿತಗಳೂ ಪರಿಹರವಾಗಿ ಸದ್ಗತಿಯುಂಟಾಗುವುದರಿಂದ ಅಂತಹ ಮಹಾನುಭಾವನಿಗೆ ವಂದನೆ ಎಂದು ಮಂಗಳಾಶಾಸನರೂಪವಾಗಿ ದ್ವಿರುಕ್ತಿಯು ಹೇಳಲ್ಪಟ್ಟಿದೆ.

ಓಂ ತತ್ಸತ್



॥ ಶ್ರೀಃ ॥

## — ಫಲಸ್ತುತಿ —



ವನಮಾಲೀ ಗದೀ ಶಾರ್ಙ್ಗೀಶಙ್ಖೀ ಚಕ್ರೀ ಚ ನನ್ದಕೀ ।
ಶ್ರೀಮಾನ್ನಾರಾಯಣೋ ವಿಷ್ಣುರ್ವಾಸುದೇವೋಽಭಿರಕ್ಷತು ॥
ಇತೀದಂ ಕೀರ್ತನೀಯಸ್ಯ ಕೇಶವಸ್ಯ ಮಹಾತ್ಮನಃ ॥
ನಾಮ್ನಾಂ ಸಹಸ್ರಂ ದಿವ್ಯಾನಾಂ ಅಶೇಷೇಣಪ್ರಕೀರ್ತಿತಂ ॥೧॥
ಯ ಇದಂ ಶೃಣುಯಾನ್ನಿತ್ಯಂ ಯಶ್ಚಾಪಿ ಪರಿಕೀರ್ತಯೇತ್ ।
ನಾಶುಭಂ ಪ್ರಾಪ್ನುಯಾತ್ಕಿಂಚಿತ್ಸೋಽಮುತ್ರೇಹಚ ಮಾನವಃ ॥೨॥

---

ವೈಜಯಂತಿಯೆಂಬ ತುಲಸೀಮಾಲೆ, ಶಾರ್ಙ್ಗವೆಂಬ ಧನುಸ್ಸು, ಶಂಖ, ಚಕ್ರ, ನಂದಕವೆಂಬ ಖಡ್ಗ, ಈ ದಿವ್ಯಾಯುಧಗಳನ್ನು ಧರಿಸಿ, ಸರ್ವವ್ಯಾಪಕನು, ಸಕಲ ಜೀವರಾಶಿಗಳಿಗೆ ಸ್ವಾಮಿಯು, ಸರ್ವಶಕ್ತನೂ ಆಗಿರುವ ಶ್ರೀಮನ್ನಾರಾಯಣನು ನಮ್ಮನ್ನು ರಕ್ಷಿಸಲಿ. "ಯಾವುದನ್ನು ಜಪಿಸಿದರೆ ಪ್ರಾಣಿಯು ಮುಕ್ತನಾಗುವನು?" ಎಂಬದಾಗಿ ಹಿಂದೆ ಧರ್ಮರಾಯನು ಮಾಡಿದ ಪ್ರಶ್ನೆಯನ್ನನುಸರಿಸಿ, ಗಟ್ಟಿಗೆ, ಅಥವಾ ಮೆಲ್ಲಗೆ, ಇಲ್ಲವೆ ಮಾನಸಿಕವಾಗಿ, ಎಂದು ಮೂರುಬಗೆಯ ಜಪಕ್ಕೂ ಯೋಗ್ಯವಾಗಿರುವ ಮಹಾನುಭಾವನಾದ ಶ್ರೀ ಕೇಶವಮೂರ್ತಿಯ ನಾಮಸಹಸ್ರವನ್ನೂ ಇದುವರೆಗೆ ಹೀಗೆ ವಿವರಿಸಿದುದಾಯಿತು. (೧) ಯಾವ ಮನುಜನಾಗಲಿ ಈಶ್ರೀಹರಿನಾಮ ಸಹಸ್ರವನ್ನು ಶ್ರದ್ಧಾಭಕ್ತಿಗಳಿಂದೊಡಗೂಡಿ ಅರ್ಥವತ್ತಾಗಿ ಕೇಳಿದರೂ ಸಂಕೀರ್ತನಮಾಡಿದರೂ ಇಹಲೋಕಸುಖವನ್ನೆಲ್ಲ ಅನುಭವಿಸಿ, ಯಯಾತಿ ನಹುಷಾದಿಗಳಂತೆ ಭೂಪತನವನ್ನೈದದೆ ಶಾಶ್ವತವಾದ ಪರಲೋಕ ಸುಖವನ್ನೂ ಅನುಭವಿಸುವನು. [ಭಜಕರಿಗೆ ವಿಶೇಷವು ತಿಳಿಸಲ್ಪಡುತ್ತದೆ.] (೨) ಬ್ರಾಹ್ಮಣನು ಜಪಿಸಿದರೆ ವೇದದ ಕೊನೆಯಲ್ಲಿ ನೆಲೆಗೊಂಡಿರುವ ಬ್ರಹ್ಮವನ್ನು ತಿಳಿದು ಮುಕ್ತನಾಗುವನು. ಎಂದರೆ—ಜಪಕರ್ಮದಿಂದ ದುರಿತಕರ್ಮವೆಲ್ಲ ನಾಶವಾಗಿ ಚಿತ್ತಶುದ್ಧಿಯ ಮೂಲಕ ಜ್ಞಾನವನ್ನು ಪಡೆದು ಕೈವಲ್ಯವನ್ನು ಅನುಭವಿಸುವನು. "ಪಾಪಕರ್ಮವು ಕ್ಷಯಿಸಲು ಜ್ಞಾನವುಂ

ವೇದಾಂತಗೋ ಬ್ರಾಹ್ಮಣಸ್ಸ್ಯಾತ್ ಕ್ಷತ್ರಿಯೋ ವಿಜಯೀ ಭವೇತ್ ।
ವೈಶ್ಯೋ ಧನಸಮೃದ್ಧ ಸ್ಸ್ಯಾ ಚ್ಛೂದ್ರ ಸ್ಸುಖ ಮವಾಪ್ನುಯಾತ್ ॥೩॥
ಧರ್ಮಾರ್ಥೀ ಪ್ರಾಪ್ನುಯಾ ದ್ಧರ್ಮ ಮರ್ಥಾರ್ಥೀ ಚಾ ರ್ಥ ಮಾಪ್ನು ಯಾತ್ ।
ಕಾಮಾ ನವಾಪ್ನು ಯಾ ತ್ಕಾಮೀ ಪ್ರಜಾರ್ಥೀ ಚಾ ಪ್ನು ಯಾ ತ್ಪ್ರಜಾಃ॥೪॥
ಭಕ್ತಿಮಾ ನ್ಯ ಸ್ಸದೋತ್ಥಾಯ ಶುಚಿ ಸ್ತದ್ಗತ ಮಾನಸಃ ।
ಸಹಸ್ರಂ ವಾಸುದೇವಸ್ಯ ನಾಮ್ನಾ ಮೇತ ತ್ಪ್ರಕೀರ್ತಯೇತ್ ॥೫॥
ಯಶಃ ಪ್ರಾಪ್ನೋತಿ ವಿಪುಲಂ ಜ್ಞಾತಿ ಪ್ರಾಧಾನ್ಯ ಮೇವಚ ।
ಅಚಲಾಂ ಶ್ರಿಯ ಮಾಪ್ನೋತಿ ಶ್ರೇಯಃ ಪ್ರಾಪ್ನೋ ತ್ಯನುತ್ತಮಮ್ ॥೬

---

ಟಾಗುವುದು, ಬಳಿಕ ಕನ್ನಡಿಯಲ್ಲಿ ತನ್ನನ್ನು ಕಾಣುವಹಾಗೆ ಅಂತರಂಗದಲ್ಲಿ ಆತ್ಮಸಾಕ್ಷಾತ್ಕಾರವನ್ನು ಪಡೆಯುವನು. " (ತ್ರೈ, ಆ) ಕ್ಷತ್ರಿಯನು ನಾಮಸಂಕೀರ್ತನ ಮಾಡುವುದರಿಂದ ದಿಗ್ವಿಜಯವುಳ್ಳವನಾಗುತ್ತಾನೆ ವೈಶ್ಯನಾದರೆ ಧನಸಮೃದ್ಧಿಯನ್ನುಹೊಂದುವನು. ಶೂದ್ರನು ಈ ನಾಮ ಸಹಸ್ರವನ್ನುಶ್ರವಣಮಾಡಿದರೆ ಸಮಸ್ತಸುಖವನ್ನೂ ಪಡೆಯುವನು. (೩) ಧರ್ಮದ ಬಯಕೆಯುಳ್ಳವನು ಧರ್ಮವನ್ನೂ, ಅರ್ಥಾಭಿಲಾಷೆಯುಳ್ಳವನು ಅರ್ಥವನ್ನೂ, ಧರ್ಮವಿರುದ್ಧವಲ್ಲದ ಕಾಮಗಳನ್ನು ಅಪೇಕ್ಷಿಸುವವನು ಕಾಮಗಳನ್ನೂ, ಸತ್ಸಂತಾನಾಕಾಂಕ್ಷಿಯು ಸತ್ಸಂತಾನವನ್ನೂ, ಪಡೆಯುತ್ತಾರೆ. (೪) ಮತ್ತು ಪುರುಷನು ಪರಿಶುದ್ಧನಾಗಿ, ಶ್ರದ್ಧಾಭಕ್ತಿಗಳಿಂದೊಡಗೂಡಿ, ಏಕಾಗ್ರಚಿತ್ತತೆಯಿಂದ ಎಡೆಬಿಡದೆ ಪರವಾಸುದೇವನ ಈ ನಾಮ ಸಹಸ್ರವನ್ನು ಸಂಕೀರ್ತನಮಾಡಿದರೆ ಉಂಟಾಗತಕ್ಕ ವಿಶೇಷಗಳೇನೆಂದರೆ—ಹೇರಳವಾಗಿಯೂ ನಿರ್ಮಲವಾಗಿಯೂ ಇರುವ ಕೀರ್ತಿ, ಬಂಧುವರ್ಗದಲ್ಲಿ ಶ್ರೇಷ್ಠನೆಂಬ ಖ್ಯಾತಿ, ಸ್ಥಿರವಾದ ಸಂಪತ್ತು, ಧರ್ಮಕಾರ್ಯದ ಯಶಸ್ಸು ಇವುಗಳನ್ನೆಲ್ಲ ಪಡೆಯುವನು. (೫) ಯಾವುದರಿಂದಲೂ ಭಯಪಡದಿರುವುದು, ದೇಹಶಕ್ತಿ, ಪರಾಕ್ರಮ, ಆರೋಗ್ಯ, ತೇಜಸ್ಸು, ಅವಯವಪುಷ್ಟಿ, ಒಳ್ಳೆಯ ಆಕಾರ, ಸದ್ಗುಣ ಈ ಮೊದಲಾದ ಶ್ರೇಯಸ್ಸುಗಳು ಲಭಿಸುತ್ತವೆ (೬) ಮತ್ತು, ಪುರುಷೋತ್ತಮನಾದ ಶ್ರೀಹರಿಯ ನಾಮಸಹಸ್ರವನ್ನು ಭಕ್ತಿಯಿಂದ ನಿತ್ಯವೂ ಸ್ತುತಿಸಿದರೆ ಭಯಪೀಡಿತನಾದವನು, ಭಯದಿಂದ ಬಿಡುಗಡೆಯನ್ನು ಹೊಂದುವನು, ವೀರ್ಯತೇಜಸ್ಸುಗಳನ್ನುಪಡೆದು,

ನ ಭಯಂ ಕ್ವಚಿ ದಾಪ್ನೋತಿ ವೀರ್ಯಂತೇಜಶ್ಚ ವಿನ್ದತಿ ।
ಭವ ತ್ಯರೋಗೊ ದ್ಯುತಿಮಾ ನ್ಬಲರೂಪಗುಣಾನ್ವಿತಃ ॥೭॥
ರೋಗಾರ್ತೋ ಮುಚ್ಯತೇ ರೋಗಾ ದ್ಬದ್ಧೋ ಮುಚ್ಯೇತ ಬನ್ಧನಾತ್ ।
ಭಯಾ ನ್ಮುಚ್ಯೇತ ಭೀತಸ್ತು ಮುಚ್ಯೇತಾಪನ್ನ ಆಪದಃ ॥೮॥
ದುರ್ಗಾ ಣ್ಯತಿತರ ತ್ಯಾಶು ಪುರುಷಃ ಪುರುಷೋತ್ತಮಮ್ ।
ಸ್ತುವ ನ್ನಾಮಸಹಸ್ರೇಣ ನಿತ್ಯಂ ಭಕ್ತಿಸಮನ್ವಿತಃ ॥೯॥
ವಾಸುದೇವಾಶ್ರಯೋ ಮರ್ತ್ಯೋ ವಾಸುದೇವ ಪರಾಯಣಃ ।
ಸರ್ವಪಾಪ ವಿಶುದ್ಧಾತ್ಮಾ ಯಾತಿ ಬ್ರಹ್ಮ ಸನಾತನಂ ॥೧೦॥
ನ ವಾಸುದೇವಭಕ್ತಾನಾ ಮಶುಭಂ ವಿದ್ಯತೇ ಕ್ವಚಿತ್ ।
ಜನ್ಮಮೃತ್ಯು ಜರಾ ವ್ಯಾಧಿ ಭಯಂ ನೈವೋಪ ಜಾಯತೆ ॥೧೧॥
ಇಮಂ ಸ್ತವ ಮಧೀಯಾನ ಶ್ಶ್ರದ್ಧಾಭಕ್ತಿ ಸಮನ್ವಿತಃ ।

---

ಬಲ, ರೂಪ ಗುಣಗಳಿಂದೊಡಗೂಡುವನು, ಆಪತ್ತನ್ನು ಹೊಂದಿದವನು ಆಪತ್ತಿನಿಂದ ಮುಕ್ತನಾಗುವನು, ಕಷ್ಟಗಳನ್ನೆಲ್ಲ ದಾಟುವನು. (೭) ಮತ್ತು ರೋಗದಿಂದ ಪೀಡಿತನಾಗಿದ್ದರೆ ರೋಗಮುಕ್ತನಾಗುವನು, ಬಂಧ ಕ್ಕೊಳಗಾಗಿದ್ದರೆ ಬಂಧಮುಕ್ತನಾಗುವನು, ಭಯಗ್ರಸ್ತನಾಗಿದ್ದರೆ ನಿರ್ಭ ಯನಾಗುವನು, ಆಪತ್ತಿಗೊಳಗಾಗಿದ್ದರೆ ಆಪತ್ತನ್ನು ದಾಟುವನು. (೮) ನಿತ್ಯವೂ ಭಕ್ತಿಯಿಂದೊಡಗೂಡಿ ಈ ನಾಮಸಹಸ್ರಪಾರಾಯಣ ಮಾಡು ವ ಪುರುಷನು ಆ ಪುರುಷೋತ್ತಮನ ಅನುಗ್ರಹದಿಂದ ಪರಿಹರಿಸಲಾಗದ ಕಷ್ಟಗಳನ್ನೆಲ್ಲ ದಾಟುತ್ತಾನೆ. (೯) ವಾಸುದೇವನೇ ಸದ್ಗತಿಯು, ಅವನೇ ರಕ್ಷಕನು ಎಂದು ಆತನನ್ನೇ ಮರೆಹೊಗುವ ಮನುಷ್ಯನು ಸಕಲ ಪಾಪಗ ಳಿಂದಲೂ ಬಿಡುಗಡೆಯನ್ನು ಹೊಂದಿ ಸಚ್ಚಿದಾನಂದಸ್ವರೂಪವಾಗಿರುವ ಬ್ರಹ್ಮವನ್ನು ಸೇರುವನು. (೧೦) ಆ ವಾಸುದೇವ ಪರಮಾತ್ಮನ ಭಕ್ತರಿಗೆ ಅಶುಭವೆಂಬುವದು ಎಲ್ಲಿಯೂ, ಯಾವಾಗಲೂ ಎಳ್ಳಷ್ಟಾದರೂ ಸಂಭವಿಸು ವುದಿಲ್ಲ, ಪುನರ್ಜನ್ಮ, ಮರಣ, ಮುಪ್ಪು, ವ್ಯಾಧಿ ಈ ಮೊದಲಾದವುಗಳ ಭಯಲೇಶವೂ ಉಂಟಾಗುವುದಿಲ್ಲ. (೧೧) ಶ್ರದ್ಧಾಭಕ್ತಿಗಳಿಂದೊಡಗೂಡಿ ತಪ್ಪದೆ ಈ ಸ್ತೋತ್ರವನ್ನು ಪಾರಾಯಣ ಮಾಡಿದರೆ ಆತ್ಮಸುಖ, ತಾಳ್ಮೆ ಸಮಾಧಾನ, ನೆಮ್ಮದಿ, ಸಂಪತ್ತು, ಧೈರ್ಯ, ಸಂತೋಷ, ಸ್ಮರಣಶಕ್ತಿ,

ಯುಜ್ಯೇ ತಾತ್ಮಸುಖ ಕ್ಷಾನ್ತಿ ಶ್ರೀ ಧೃತಿ ಸ್ಮೃತಿ ಕೀರ್ತಿಭಿಃ ||೧೭||
ನ ಕ್ರೋಧೋ ನ ಚ ಮಾತ್ಸರ್ಯಂ ನ ಲೋಭೋನಾಶುಭಾ ಮತಿಃ |
ಭವಂತಿ ಕೃತಪುಣ್ಯಾನಾಂ ಭಕ್ತಾನಾಂ ಪುರುಷೋತ್ತಮೇ ||೧೩||
ದ್ಯೌ ಸ್ಸಚಂದ್ರಾರ್ಕ ನಕ್ಷತ್ರಂ ಖಂ ದಿಶೊ ಭೂ ರ್ಮಹೋದಧಿಃ |
ವಾಸುದೇವಸ್ಯ ವೀರ್ಯೇಣ ವಿಧೃತಾನಿ ಮಹಾತ್ಮನಃ ||೧೪||
ಸಸುರಾಸುರ ಗಂಧರ್ವಂ ಸಯಕ್ಷೋರಗ ರಾಕ್ಷಸಂ |
ಜಗದ್ವಶೇ ವರ್ತತೇ ದಂ ಕೃಷ್ಣಸ್ಯ ಸಚರಾಚರವ್ ||೧೫||
ಇಂದ್ರಿಯಾಣಿ ಮನೋ ಬುದ್ಧಿ ಸ್ಸತ್ವಂ ತೇಜೋ ಬಲಂಧೃತಿಃ |
ವಾಸುದೇವಾತ್ಮಕಾ ನ್ಯಾಹುಃ ಕ್ಷೇತ್ರಂ ಕ್ಷೇತ್ರಜ್ಞ ಏವಚ ||೧೬||

---

ಕೀರ್ತಿ ಇತ್ಯಾದಿಗಳಿಂದೊಡಗೂಡುವನು. (೧೨) ಪುರುಷೋತ್ತಮನಾದ ಆ ಶ್ರೀಹರಿಯಲ್ಲಿ ಭಕ್ತರಾದವರೇ ಪುಣ್ಯಾತ್ಮರು, ಅಂಥವರಿಗೆ ಕ್ರೋಧ ವಿಲ್ಲ, ದ್ವೇಷವಿಲ್ಲ, ಲೋಭವಿಲ್ಲ, ಅಮಂಗಳಬುದ್ಧಿಯೂ ಇರುವುದಿಲ್ಲ ಈ ದುರ್ಗುಣಗಳಿಂದ ಮುಕ್ತರಾಗುವರು. (೧೩) ಈ ಮುಂದೆ ಹೇಳುವ ವಾ ಸುದೇವಮೂರ್ತಿಯ ಮಾಹಾತ್ಮ್ಯವನ್ನು ಕೇಳುವುದರಿಂದಲೇ ಆತನ ಅನು ಗ್ರಹದಿಂದ ಉಂಟಾಗುವ ಫಲಗಳು ಯಥಾರ್ಥಗಳಲ್ಲದೆ ಕೇವಲ ಸ್ತುತಿಮಾ ತ್ರ ಪರಗಳು ಎಂದು ಭಾವಿಸಕೂಡದು ಎಂಬುದು ವ್ಯಕ್ತವಾಗುತ್ತದೆ (೧೩) ಚಂದ್ರ, ಸೂರ್‍ಯ, ನಕ್ಷತ್ರ, ಆಕಾಶ, ದಿಕ್ಕುಗಳು,ಭೂಮಿ,ಸಮುದ್ರ ಇವುಗಳೆ ಲ್ಲವೂಮಹಾನುಭಾವನಾದ ವಾಸುದೇವನ ವೀರ್‍ಯದಲ್ಲಿ ನೆಲೆಗೊಂಡಿವೆ.(೧೪ ದೇವದಾನವಗಂಧರ್ವರು,ಯಕ್ಷರು,ಉರಗರು,ರಾಕ್ಷಸರು ಇವರಿಂದೊಡಗೂ ಡಿದ ಚರಾಚರಾತ್ಮಕವಾದ ಜಗತ್ತೆಲ್ಲವೂ ಶ್ರೀಕೃಷ್ಣನ ಅಧೀನದಲ್ಲಿದೆ (೧೫ ಇಂದ್ರಿಯಗಳು, ಮನಸ್ಸು, ಬುದ್ಧಿ, ಸತ್ವ, ತೇಜಸ್ಸು, ಬಲ, ಸಂತೋಷ [ಧೈರ್ಯ] ಶರೀರ, ಜೀವ, ಇವರೆಲ್ಲರೂ ವಾಸುದೇವಸ್ವರೂಪರು ಎಂದು ತತ್ವಜ್ಞರು ಹೇಳುತ್ತಾರೆ. (೧೬) ಸರ್ವಶಾಸ್ತ್ರಗಳಲ್ಲಿಯೂ ಸದಾಚಾರ ವೇ ಪರಮಧರ್ಮವೆಂದು ನಿಷ್ಕರ್ಷೆಯಾಗಿದೆ. ಸದಾಚಾರದಿಂದಲೇ ಸದ್ಧರ್ಮ ವು ಸಂಭವಿಸುವುದು, ಆ ಸದ್ಧರ್ಮಕ್ಕೆ ಅಚ್ಯುತನೇ ಸ್ವಾಮಿಯು, ಎಂದರೆ ಸದಾಚಾರಸಂಪನ್ನನಾಗಿ ನಾಮಸಹಸ್ರಪಾರಾಯಣ ಮಾಡಿದರೆ ಫಲಭಾ ಗಿಯಾಗುವನು. (೧೭) ಮಂತ್ರಜ್ಞರಾದ ಮುನಿಗಳು, ಪಿತೃಗಳು, ದೇವತೆ

ಸರ್ವಾಗಮಾನಾ ಮಾಚಾರಃ ಪ್ರಥಮಃ ಪರಿಕಲ್ಪ್ಯತೇ ।
ಆಚಾರಪ್ರಭವೋ ಧರ್ಮಃ ಧರ್ಮಸ್ಯ ಪ್ರಭು ರಚ್ಯುತಃ ॥೧೭॥
ಋಷಯಃ ಪಿತರೋ ದೇವಾ ಮಹಾಭೂತಾನಿ ಧಾತವಃ ।
ಜಙ್ಗಮಾ ಜಙ್ಗಮಂ ಚೇದಂ ಜಗನ್ನಾರಾಯಣೋದ್ಭವಂ ॥೧೮॥
ಯೋಗೋ ಜ್ಞಾನಂ ತಥಾ ಸಾಙ್ಖ್ಯಂ ವಿದ್ಯಾ ಶ್ಶಿಲ್ಪಾದಿ ಕರ್ಮಚ ।
ವೇದಾ ಶ್ಶಾಸ್ತ್ರಾಣಿ ವಿಜ್ಞಾನ ಮೇತತ್ಸರ್ವಂ ಜನಾರ್ದನಾತ್ ॥೧೯॥
ಏಕೋವಿಷ್ಣು ರ್ಮಹದ್ಭೂತಂ ಪೃಥಗ್ಭೂತಾ ನ್ಯನೇಕಶಃ ।
ತ್ರೀನ್ಲೋಕಾ ನ್ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ॥೨೦॥
ಇಮಂ ಸ್ತವಂ ಭಗವತೋ ವಿಷ್ಣೋ ರ್ವ್ಯಾಸೇನ ಕೀರ್ತಿತಮ್ ।
ಪಠೇ ದ್ಯ ಇಚ್ಛೇ ತ್ಪುರುಷ ಶ್ಶ್ರೇಯಃ ಪ್ರಾಪ್ತುಂ ಸುಖಾನಿಚ ॥೨೧॥

---

ಗಳು, ಪೃಥಿವ್ಯಾದಿ ಭೂತಗಳು, ಭೂಮಿ, ಪರ್ವತಾದಿಗಳಲ್ಲಿನ ಸಸ್ಯ, ಮೂಲಿಕೆ, ರಸ, ಧಾತುವರ್ಗಗಳು, ಹೆಚ್ಚಿಗೆಯೇನು? ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ನಾರಾಯಣನಿಂದಲೇ ಉಂಟಾದುದು. (೧೮) ಅಷ್ಟಾಂಗಯೋಗವು, ಜ್ಞಾನಯೋಗವು, ಕರ್ಮಯೋಗವು, ಇಪ್ಪತ್ತುನಾಲ್ಕುವಿದ್ಯೆಗಳು, ವ್ಯವಹಾರೋಪಯೋಗಿಯಾದ ಕುಶಲವಿದ್ಯೆಗಳು, ವೇದಗಳು, ತರ್ಕವ್ಯಾಕರಣಾದಿಶಾಸ್ತ್ರಗಳು, ಭೌತಿಕಶಾಸ್ತ್ರವು, ಇದೆಲ್ಲವೂ ಆ ಪುರುಷೋತ್ತಮನಾದ ಜನಾರ್ದನನಿಂದಲೇ ಉಂಟಾದುದು. (೧೯) ಸರ್ವವ್ಯಾಪಕನಾದ ವಿಷ್ಣುಪರಮಾತ್ಮನೊಬ್ಬನೇ ಇರತಕ್ಕವನು, ಅವನೇ ಅನೇಕಾಕಾರಗಳಾಗಿದ್ದಾನೆ, ಸರ್ವಭೂತಸ್ವರೂಪನಾಗಿರುವ ಆತನೇ ಮೂರುಲೋಕಗಳಲ್ಲಿಯೂ ವ್ಯಾಪಿಸಿ ನಾಶರಹಿತನಾಗಿ ಸರ್ವಪಾಲಕನಾಗಿಯೂ ಸರ್ವಸಂಹಾರಕನಾಗಿಯೂ ಇರುವನು. (೨೦) ಸಹಸ್ರಶಾಖಾರೂಪವಾದ ವೇದರಾಶಿಯನ್ನೆಲ್ಲ ಬಲ್ಲ ಸರ್ವಜ್ಞನಾದ ವ್ಯಾಸಮಹರ್ಷಿಯು ಶ್ರೀಮನ್ನಾರಾಯಣನ ನಾಮಸಹಸ್ರವನ್ನು ರಚಿಸಿರುವನು. ಯಾವಪುರುಷನು ಈಲೋಕಸುಖಗಳನ್ನೂ ಪರಲೋಕ ಸುಖವನ್ನೂ ಬಯಸುವನೋ ಆತನು ಶ್ರದ್ಧಾಭಕ್ತಿಗಳಿಂದೊಡಗೂಡಿ ಪರಿಶುದ್ಧನಾಗಿ ಈ ಸ್ತೋತ್ರವನ್ನು ಪಠಿಸಬೇಕು. (೨೧) ಜಗದೀಶ್ವರನು, ಉತ್ಪತ್ತಿರಹಿತನು, ಪ್ರಕಾಶಮಾನನು, ಜಗನ್ನಿಯಾಮಕನು, ನಾಶರಹಿತನೂ, ಆಗಿರುವನು, ಆಪುಂಡರೀಕಾಕ್ಷನನ್ನು ಅನ

ವಿಶ್ವೇಶ್ವರ ಮಜಂ ದೇವಂ ಜಗತಃ ಪ್ರಭು ಮವ್ಯಯಮ್ ।
ಭಜಂತಿ ಯೇ ಪುಷ್ಕರಾಕ್ಷಂ ನ ತೇ ಯಾಂತಿ ಪರಾಭವಮ್ ॥೨೨॥
ನ ತೇ ಯಾಂತಿ ಪರಾಭವವೋಂ ನಮ ಇತಿ.

॥ಅರ್ಜುನ ಉವಾಚ॥

ಪದ್ಮಪತ್ರವಿಶಾಲಾಕ್ಷ ಪದ್ಮನಾಭ ಸುರೋತ್ತಮ ।
ಭಕ್ತಾನಾಮ ನುರುಕ್ತಾನಾಂ ತ್ರಾತಾ ಭವ ಜನಾರ್ದನ ॥೨೩॥

॥ಶ್ರೀಭಗವಾನುವಾಚ॥

ಯೋ ಮಾಂ ನಾಮಸಹಸ್ರೇಣ ಸ್ತೋತು ಮಿಚ್ಛತಿ ಪಾಂಡವ ।
ಸೋಹ ಮೇಕೇನ ಶ್ಲೋಕೇನ ಸ್ತುತ ಏವ ನ ಸಂಶಯಃ ॥೨೪॥
ಸ್ತುತ ಏವ ನ ಸಂಶಯ ಓಂನಮ ಇತಿ.

॥ ವ್ಯಾಸ ಉವಾಚ ॥

ವಾಸನಾ ದ್ವಾಸುದೇವಸ್ಯ ವಾಸಿತಂ ತೇ ಜಗತ್ತ್ರಯಮ್ ।

---

ನ್ಯಶರಣರಾಗಿ ಯಾರು ಭಜಿಸುತ್ತಾರೆಯೊ ಅವರು ದುರ್ಗತಿಯನ್ನು ಪಡೆಯುವುದೇ ಇಲ್ಲ, ಸತ್ಯವಾಗಿಯೂ ದುರ್ಗತಿಯನ್ನು ಪಡೆಯುವುದಿಲ್ಲ. ಅಂತಹ ಮಹಾನುಭಾವನಾದ ಪರಮಾತ್ಮನಿಗೆ ವಂದನೆಗಳನ್ನು ಸಮರ್ಪಿಸುತ್ತೇನೆ. (೨೨) ಅರ್ಜುನನು ಹೀಗೆ ಹೇಳುತ್ತಾನೆ.— ಕೆಂದಾವರೆಯಂತೆ ಅರಳಿದ ಕಣ್ಣುಳ್ಳ ಎಲೈ ವಾಸುದೇವಮೂರ್ತಿಯೆ! ಕಮಲನಾಭನಾದ ಎಲೈ ದೇವೋತ್ತಮನೆ! ಓ ದುಷ್ಟಸಂಹಾರಕನಾದ ಜನಾರ್ದನಾ! ಸರ್ವಪ್ರಕಾರದಿಂದಲೂ ನಿನ್ನನ್ನೇ ಮರೆಹೊಕ್ಕಿರುವ ನಿನ್ನ ಭಕ್ತರನ್ನು ನೀನು ತಪ್ಪದೆ ರಕ್ಷಿಸಬೇಕು ಎನಲು, ಅದಕ್ಕೆ ಶ್ರೀಕೃಷ್ಣ ಪರಮಾತ್ಮನ ಉತ್ತರ (೨೩) ಶ್ರೀಕೃಷ್ಣಪರಮಾತ್ಮನು ಹೇಳುತ್ತಾನೆ. ಎಲೈ ಪಾಂಡುಪುತ್ರನೇ! ಯಾವನು ನಾಮಸಹಸ್ರದಿಂದ ನನ್ನನ್ನು [ಓಂ, ನಮಃ] ಎಂಬದಾಗಿ ಸ್ತೋತ್ರಮಾಡಬೇಕೆಂದು ಬಯಸುತ್ತಾನೆಯೋ ಅಂಥವನಿಂದ ಈ ನಾನು ಒಂದೇ ಶ್ಲೋಕದಿಂದಲೇ ಸ್ತುತಿಸಲ್ಪಟ್ಟವನು ಎಂದು ತಿಳಿ. (೨೪) ಅಂತಹ ಶ್ಲೋಕವು ಯಾವುದೆಂದರೆ,-ವೇದಾಚಾರ್ಯರಾದವ್ಯಾಸರು ಹೇಳುತ್ತಾರೆ.- ಸಮಸ್ತಪ್ರಪಂಚವೂ ಅಂತರ್ಯಾಮಿಯಾಗಿರುವ ವಾಸುದೇವಮೂರ್ತಿಯಿಂದ ಪರಿಪೂರ್ಣವೆನಿಸಿದೆ, ಎಲೈ ವಾಸುದೇವಮೂರ್ತಿಯೇ! ಹೀಗೆ ಸಮಸ್ತಭೂತಗಳಿಗೂ ನೀನು ನಿವಾಸಸ್ಥಾನವಾಗಿದ್ದೀಯೆ. ಅಂತಹ ಓಂ

ಸರ್ವಭೂತ ನಿವಾಸೋಽಸಿ ವಾಸುದೇವ ನಮೋಽಸ್ತು ತೇ ||೨೫||
ಶ್ರೀ ವಾಸುದೇವ ನಮೋಽಸ್ತುತ ಓಂನಮ ಇತಿ.

|| ಪಾರ್ವತ್ಯುವಾಚ ||

ಕೇನೋಪಾಯೇನ ಲಘುನಾ ವಿಷ್ಣೋರ್ನಾಮ ಸಹಸ್ರಕಮ್ ।
ಪಠ್ಯತೇ ಪಂಡಿತೈರ್ನಿತ್ಯಂ ಶ್ರೋತುಮಿಚ್ಛಾಮ್ಯಹಂ ಪ್ರಭೋ ||೨೬||

|| ಈಶ್ವರ ಉವಾಚ ||

ಶ್ರೀರಾಮ ರಾಮ ರಾಮೇತಿ ರಮೇ ರಾಮೇ ಮನೋರಮೇ ।
ಸಹಸ್ರ ನಾಮ ತತ್ತುಲ್ಯಂ ರಾಮನಾಮ ವರಾನನೇ ||೨೭||

|| ಬ್ರಹ್ಮೋವಾಚ ||

ನಮೋಽಸ್ತ್ವನಂತಾಯ ಸಹಸ್ರ ಮೂರ್ತಯೇ ಸಹಸ್ರಪಾದಾಕ್ಷಿ

---

ಕಾರಸ್ವರೂಪನಾದ ಶ್ರೀ ವಾಸುದೇವಪರಮಾತ್ಮನೇ! ನನ್ನ ಈ ವಂದನೆಯು ಪುನಃ ಪುನಃ ನಿನಗೆ ಸಮರ್ಪಿತವಾಗುತ್ತಿರಲಿ. (೨೫) ಪಾರ್ವತಿಯು ಶಂಕರನನ್ನು ಕುರಿತು ಪ್ರಶ್ನೆಮಾಡುತ್ತಾಳೆ.—ಎಲೈ ಪ್ರಭುವೇ! ಲೋಕದಲ್ಲಿ ಜ್ಞಾನಿಗಳಾದವರು ಶ್ರೀಮಹಾವಿಷ್ಣುವಿನ ನಾಮಸಹಸ್ರವನ್ನು ಯಾವ ಸುಲಭೋಪಾಯದಿಂದ ಪಾರಾಯಣಮಾಡುತ್ತಾರೆಯೋ ಅಂತಹನಾದ ಒಂದೇ ಶ್ಲೋಕವನ್ನು ನೀನು ದಯೆಮಾಡಿ ತಿಳಿಸಿದರೆ ಕೇಳಬೇಕೆಂದು ಬಯಸುತ್ತೇನೆ ಎನಲು, ಪರಮೇಶ್ವರನು ಹೀಗೆ ಹೇಳುತ್ತಾನೆ. (೨೬) ಮನೋಹರಳಾದ ಓ, ಪ್ರಿಯೆ! ಶ್ರೀರಾಮ, ರಾಮ, ರಾಮ, ಎಂಬ ಅಮೃತಮಯವಾದ [ಮಹಾಯೋಗಿಗಳ ಮನಸ್ಸಿನಲ್ಲಿ ಪರಮಾನಂದವನ್ನುಂಟುಮಾಡುತ್ತಿರುವ] ಈ ದಿವ್ಯನಾಮವನ್ನೇ ಜ್ಞಾನಿಗಳಸಂಗ್ರಹವಾದಸಹಸ್ರನಾಮವನ್ನಾಗಿ ಪ್ರೀತಿಸುತ್ತೇನೆ. ಸರ್ವಮಂಗಳೆಯಾದ ಎಲೈ ಸುಮುಖಿಯೆ! ಶ್ರೀರಾಮ ಎಂಬ ದಿವ್ಯನಾಮವೇ ಆ ವಿಷ್ಣುಸಹಸ್ರನಾಮ ಸದೃಶವಾದದ್ದೆಂದು ತಿಳಿ ಎಂದು ಉಪದೇಶಿಸಿದನು. (೨೭) ಜಗತ್ತಿಗೆ ಸೃಷ್ಟಿಕರ್ತನಾದ ಬ್ರಹ್ಮನು- ನಾಶರಹಿತನೆನಿಸಿ, ಸಾವಿರಾರು ಶರೀರಗಳಿಂದಲೂ, ಸಾವಿರಾರು ಪಾದ, ನಯನ, ಶಿರಸ್ಸು, ತೊಡೆ, ತೋಳು, ಇವುಗಳಿಂದಲೂ ಒಡಗೂಡಿ, ಸಹಸ್ರನಾಮಗಳನ್ನೂ ಹೊಂದಿ, ಸಮಸ್ತ ಜಗತ್ತನ್ನೂ ಇಚ್ಛಾಮಾತ್ರದಿಂದ ನಿಯಮಿಸುತ್ತ, ಸಾವಿರಾರು ಕೋಟಿ ಯುಗಗಳಿಂದಲೂ ನೆಲೆಗೊಂಡಿರುವ ವಿರಾಟ್ ಸ್ವರೂಪನಾದ ಪರಮಪುರು

ಶಿರೋರು ಬಾಹವೇ । ಸಹಸ್ರನಾಮ್ನೇ ಪುರುಷಾಯ ಶಾಶ್ವತೇ ಸಹಸ್ರ
ಕೋಟೀ ಯುಗ ಧಾರಿಣೇ ನಮಃ ||೨೮||

|| ಸಂಜಯ ಉವಾಚ ||

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀ ರ್ವಿಜಯೋ ಭೂತಿ ರ್ಧ್ರುವಾ ನೀತಿ ರ್ಮತಿ ರ್ಮಮ ||೨೯||

|| ಭಗವಾನುವಾಚ ||

ಅನನ್ಯಾ ಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ||
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ||೩೦||

---

ಷನಿಗೆ ಓಂಕಾರ ಪಾಠಪೂರ್ವಕವಾದ ವಂದನೆಯನ್ನು ಶ್ರದ್ಧಾಭಕ್ತಿಗಳಿಂದ ಸಮರ್ಪಿಸೋಣವೇ ಸಹಸ್ರನಾಮ ಪಾರಾಯಣ ಎಂದು ನನ್ನ ಅಭಿಮತವು ಎಂದನು (೨೮) ಎಲ್ಲಿ ಯಾವಾಗ ಯಾರಿಂದ ಪರಮಯೋಗೀಶ್ವರನಾದ ಶ್ರೀಕೃಷ್ಣಭಗವಂತನು ಭಕ್ತಿಯಿಂದ ಸ್ಮರಣೆಮಾಡಲ್ಪಡುತ್ತಾನೆಯೋ, ಹಾಗೆಯೇ ಧನುರ್ಧಾರಿಯಾದ ಅರ್ಜುನನೂ ಸ್ಮರಿಸಲ್ಪಡುತ್ತಾನೆಯೋ, ಅಲ್ಲಿಯೇ, ಆಗಲೇ, ಅದೇ ಸಹಸ್ರನಾಮಪಾರಾಯಣ, ಅಂಥವರಲ್ಲಿಯೇ ಸಂಪತ್ತು, ವಿಜಯ, ಐಶ್ವರ್ಯ, ಈ ಮುಂತಾದ ಭಾಗ್ಯಗಳೆಲ್ಲವೂ ಎಡೆಬಿಡದೆ ಯಾವಾಗಲೂ ನೆಲೆಗೊಂಡಿರುವವು. ಇದೇ ಸಹಸ್ರನಾಮಪಾರಾಯಣ, ಅದರ ಫಲವೂ ಇದೆ ಎಂಬುದು ನನ್ನ ಮತ ಎಂದನು. ೨೯) ಇವುಗಳ ಮೇಲೆ ಭಕ್ತವತ್ಸಲನಾದ ಶ್ರೀಕೃಷ್ಣಪರಮಾತ್ಮನ ಅಭಯದಾನ— ಯಾರಾದರೆ ಅನನ್ಯಶರಣರಾಗಿ ಮನಃಪೂರ್ವಕವಾದ ಭಕ್ತಿಯಿಂದ ನನ್ನ ದಿವ್ಯನಾಮವನ್ನು ಬಾಯಿಂದ ಪಠಿಸುತ್ತ, ಅರ್ಥಜ್ಞಾನಪೂರ್ವಕವಾಗಿ ಮನಸ್ಸಿನಲ್ಲಿ ಧ್ಯಾನಿಸುತ್ತ, ಸಾಷ್ಟಾಂಗವಾಗಿ ಕ್ರಿಯಾರೂಪದಿಂದ ನಮಸ್ಕರಿಸುತ್ತಲೂ ನನ್ನನ್ನು ಸೇವಿಸಿ ಮರೆ ಹೊಗುವರೋ, ಅಂತಹ ನಿತ್ಯಭಕ್ತರ ಸ್ಥಿತಿಗೆ ಯಾವುದೊಂದು ತೊಂದರೆ ಬರದಹಾಗೂ, ಮುಂದೆ ಕ್ರಮವಾಗಿ ಎಲ್ಲ ಶ್ರೇಯಸ್ಸುಗಳೂ ಉಂಟಾಗುವಹಾಗೂ ಅವರ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವಭಾರವು ನನ್ನ ತಲೆಯಮೇಲೆ ಇದೆ. (೩೦) ಏಕೆಂದರೆ— ಸಾಧುಗಳನ್ನು ಸಂರಕ್ಷಿಸಿ ಉದ್ಧರಿಸಲಿಕ್ಕೂ, ಪಾಪಿಷ್ಠರನ್ನು ಧ್ವಂಸಮಾ

ಆರ್ತಾ ವಿಷಣ್ಣಾ ಶ್ಶಿಥಿಲಾ ಶ್ಚ ಭೀತಾಃ ಘೋರೇಷು ಚ ವ್ಯಾಧಿಷು ವರ್ತಮಾನಾಃ । ಸಂಕೀರ್ತ್ಯ ನಾರಾಯಣ ಶಬ್ದಮಾತ್ರಂ ವಿಮುಕ್ತದುಃಖಾ ಸ್ಸುಖಿನೋಭವಂತೀ ||೩೧||

|| ಓಂತತ್ಸತ್ ||

ಇತಿ ಶ್ರೀಮಹಾಭಾರತೇ, ಆನುಶಾಸನಿಕೆ ಪರ್ವಣಿ ಭೀಷ್ಮಯುಧಿಷ್ಠಿರ ಸಂವಾದೇ ಶ್ರೀ ವಿಷ್ಣೋಃ ರ್ದಿವ್ಯ ಸಹಸ್ರನಾಮ ಸ್ತೋತ್ರಂ ಸಂಪೂರ್ಣಂ.

ಅಥೋತ್ತರನ್ಯಾಸಃ.

ಕಾಯೇನ ವಾಚಾ ಮನಸೇಂ ದ್ರಿಯೈ ರ್ವಾ ಬುಧ್ಯಾ ತ್ಮನಾ ವಾನುಸೃತ ಸ್ಸ್ವಭಾವಾತ್ । ಕರೋಮಿ ಯದ್ಯ ತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ||

ಶ್ರೀವಾಸುದೇವಾರ್ಪಣಮಸ್ತು.

---

ಡಲಿಕ್ಕೂ, ಅಧರ್ಮವನ್ನು ನಾಶಗೊಳಿಸಿ ಧರ್ಮೋದ್ಧಾರ ಮಾಡಲಿಕ್ಕೂ ಪ್ರತಿಯೊಂದು ಯುಗದಲ್ಲಿಯೂ ಸಮಯಾನುಸಾರ ನಾನು ನಾನಾದೇಶಪಲ್ಲಿ ನಾನಾರೂಪದಿಂದ ಅವತರಿಸುವೆನು ಎಂದು ಅಪ್ಪಣೆಕೊಡಿಸಿದಾನೆ. (೩೧)

ಆದುದರಿಂದಲೇ ಬಗೆಬಗೆಯ ವ್ಯಸನಗಳಿಂದ ದೀನರಾದವರೂ, ನಾನಾಕ್ಲೇಶಗಳಿಂದ ಖಿನ್ನರಾಗಿರುವವರೂ, ವಿವಿಧಚಿಂತೆಗಳಿಂದ ಜೀರ್ಣರಾಗುತ್ತಿರುವವರೂ, ತರತರವಾದ ವೇಧೆಗಳಿಂದ ಭಯಗೊಂಡಿರುವವರೂ, ಅಪರಿಹಾರ್ಯವಾದ ರೋಗಗಳಿಂದ ಪೀಡಿತರಾದವರೂ ಒಂದು ಸಾರಿಯಾದರೂ ಶ್ರದ್ಧಾಭಕ್ತಿಗಳಿಂದೊಡಗೂಡಿ ಭಕ್ತವತ್ಸಲನು, ಭವರೋಗವೈದ್ಯನು, ಸಕಲ ಕಲ್ಯಾಣಗುಣ ಪರಿಪೂರ್ಣನು, ಸರ್ವಜ್ಞನು, ಸರ್ವಶಕ್ತನು, ದಯಾರ್ದ್ರಹೃದಯನು, ಅಶರಣ್ಯಶರಣ್ಯನು, ಸರ್ವಮಂಗಳ ಮೂರ್ತಿಯೂ ಆಗಿರುವ ಆ ಶ್ರೀಮನ್ನಾರಾಯಣನ ದಿವ್ಯಮಂಗಳನಾಮವನ್ನು ಪಠಿಸಿ ವಂದಿಸಿ ಸೇವಿಸಿದರೆ ಸಮಸ್ತದುಃಖಗಳಿಂದಲೂ ಬಿಡುಗಡೆಯನ್ನು ಹೊಂದಿ ಇಹಪರ ಸುಖಗಳನ್ನೆಲ್ಲ ಹೊಂದುವರು. (೩೨(

ಆದರೇಣ ಯಥಾ ಸ್ತೌತಿ ಧನವನ್ತಂ ಧನೇಚ್ಛಯಾ ।
ತಥಾ ಚೇದ್ವಿಶ್ವಕ ರ್ತಾರಂ ಕೋ ನ ಮುಚ್ಯೇತ ಬನ್ಧನಾತ್ ||

ಲೋಕದಲ್ಲಿ ಹಣವನ್ನು ಬಯಸುವವನು ಹಣಗಾರನಬಳಿಗೆ ಹೋಗಿ ಎಷ್ಟು ಆದರದಿಂದ ಅವನನ್ನು ಬಗೆಬಗೆಯಾಗಿ ಹೊಗಳುತ್ತಾನೆಯೋ, ಅದ

ರಂತೆಯೇ ಭಕ್ತಿಪೂರ್ವಕವಾಗಿ ಭಗವಂತನನ್ನು ಸ್ತುತಿಸಿದರೆ ಸಮಸ್ತ ಕಷ್ಟಗಳಿಂದಲೂ ಬಿಡುಗಡೆಯನ್ನು ಹೊಂದಿ ಸಕಲ ಸನ್ಮಂಗಳಗಳನ್ನೂ ಪಡೆದು ಸುಖಿಯಾಗುವಂ

ಸಹಸ್ರನಾಮರತ್ನಾನಾಂ ಪ್ರಭಾಸರ್ವ ಸುಖಾವಹಾ ।
ನಾರಾಯಣೇನರ ಚಿತಾ ನಾರಾಯಣ ಪದಾರ್ಪಿತಾ ॥

ಇಂತು ಅರಮನೆ ವಿದ್ವಾನ್ ದೊಡ್ಡಬೆಲೆ ನಾರಾಯಣಶಾಸ್ತ್ರಿಯು ರಚಿಸಿದ ಪ್ರಭಾ ಎಂಬ ವಿವರಣದಿಂದೊಡಗೂಡಿರುವ ಶ್ರೀ ವಿಷ್ಣುಸಹಸ್ರ ನಾಮ ರತ್ನವು.—

ಶ್ರೀಮದ್ವ್ಯಾಸಮಹರ್ಷಿ ವಿರಚಿತವಾಗಿ, ಮಹಾಸಂಹಿತೆಯೆ
ನಿಸಿ, ಶತ ಸಹಸ್ರ ಶ್ಲೋಕಗಳಿಂದೊಡಗೂಡಿರುವ,
ಶ್ರೀಮನ್ಮಹಾಭಾರತದಲ್ಲಿನ, ಆನುಶಾಸನಿಕ
ಪರ್ವದ, ಮೋಕ್ಷಧರ್ಮದಲ್ಲಿ, ಶ್ರೀ ಭೀಷ್ಮ
ಯುಧಿಷ್ಠಿರ ಸಂವಾದದೊಳಗಣ, ಶ್ರೀ
ವಿಷ್ಣುದಿವ್ಯಸಹಸ್ರನಾಮ
ರತ್ನವು ಸಂಪೂರ್ಣವು.



# ಶ್ರೀ
# ವಿಷ್ಣುಸಹಸ್ರನಾಮಾವಳಿಃ.

ಓಂ ವಿಶ್ವಸ್ಮೈನಮಃ
ವಿಷ್ಣವೇನಮಃ
ವಷಟ್ಕಾರಾಯನಮಃ
ಭೂತಭವ್ಯಭವತ್ಪ್ರಭವೇನಮಃ
ಭೂತಕೃತೇನಮಃ
ಭೂತಭೃತೇ ನಮಃ
ಭಾವಾಯನಮಃ
ಭೂತಾತ್ಮನೇನಮಃ
ಭೂತಭಾವನಾಯನಮಃ
ಪೂತಾತ್ಮನೇನಮಃ ೧೦
ಪರಮಾತ್ಮನೇನಮಃ
ಮುಕ್ತಾನಾಂ ಪರಮಾಯೈ ಗತಯೆ
ಅವ್ಯಯಾಯನಮಃ
ಪುರುಷಾಯ ನಮಃ
ಸಾಕ್ಷಿಣೇ ನಮಃ
ಕ್ಷೇತ್ರಜ್ಞಾಯ ನಮಃ
ಅಕ್ಷರಾಯ ನಮಃ
ಯೋಗಾಯನಮಃ
ಯೋಗವಿದಾಂನೇತ್ರೇನಮಃ
ಪ್ರಧಾನಪುರುಷೇಶ್ವರಾಯನ ೨೦
ನಾರಸಿಂಹವಪುಷೇ ನಮಃ
ಶ್ರೀಮತೇ ನಮಃ
ಕೇಶವಾಯ ನಮಃ
ಪುರುಷೋತ್ತಮಾಯನಮಃ

ಸರ್ವಸ್ಮೈನಮಃ
ಶರ್ವಾಯ ನಮಃ
ಶಿವಾಯ ನಮಃ
ಸ್ಥಾಣವೇ ನಮಃ
ಭೂತಾದಯೇ ನಮಃ
ಅವ್ಯಯಾಯ ನಿಧಯೇನಮಃ ೩೦
ಸಂಭವಾಯ ನಮಃ
ಭಾವನಾಯ ನಮಃ
ಭರ್ತ್ರೇ ನಮಃ
ಪ್ರಭವಾಯ ನಮಃ
ಪ್ರಭವೇ ನಮಃ
ಈಶ್ವರಾಯ ನಮಃ
ಸ್ವಯಂಭುವೇ ನಮಃ
ಶಂಭವೇ ನಮಃ
ಆದಿತ್ಯಾಯ ನಮಃ
ಪುಷ್ಕರಾಕ್ಷಾಯ ನಮಃ ೪೦
ಮಹಾಸ್ವನಾಯ ನಮಃ
ಅನಾದಿನಿಧನಾಯನಮಃ
ಧಾತ್ರೇನಮಃ
ವಿಧಾತ್ರೇನಮಃ
ಧಾತುರುತ್ತಮಾಯನಮಃ
ಅಪ್ರಮೇಯಾಯನಮಃ
ಹೃಷೀಕೇಶಾಯನಮಃ
ಪದ್ಮನಾಭಾಯನಮಃ

ಅಮರಪ್ರಭವೇನಮಃ
ವಿಶ್ವಕರ್ಮಣೇನಮಃ ೫೦
ಮನವೇನಮಃ
ತ್ವಷ್ಟ್ರೇನಮಃ
ಸ್ಥವಿಷ್ಠಾಯನಮಃ
ಸ್ಥವಿರಾಯನಮಃ
ಧ್ರುವಾಯನಮಃ
ಅಗ್ರಾಹ್ಯಾಯನಮಃ
ಶಾಶ್ವತಾಯನಮಃ
ಕೃಷ್ಣಾಯನಮಃ
ಲೋಹಿತಾಕ್ಷಾಯನಮಃ
ಪ್ರತರ್ದನಾಯನಮಃ ೬೦
ಪ್ರಭೂತಾಯನಮಃ
ತ್ರಿಕಕುಬ್ಧಾಮ್ನೇನಮಃ
ಪವಿತ್ರಾಯನಮಃ
ಮಂಗಳಾಯಪರಸ್ಮೈನಮಃ
ಈಶಾನಾಯನಮಃ
ಪ್ರಾಣದಾಯನಮಃ
ಪ್ರಾಣಾಯನಮಃ
ಜ್ಯೇಷ್ಠಾಯನಮಃ
ಶ್ರೇಷ್ಠಾಯನಮಃ
ಪ್ರಜಾಪತಯೇನಮಃ ೭೦
ಹಿರಣ್ಯಗರ್ಭಾಯನಮಃ
ಭೂಗರ್ಭಾಯನಮಃ
ಮಾಧವಾಯನಮಃ
ಮಧುಸೂದನಾಯನಮಃ
ಈಶ್ವರಾಯನಮಃ
ವಿಕ್ರಮಿಣೇನಮಃ
ಧನ್ವಿನೇನಮಃ
ಮೇಧಾವಿನೇನಮಃ
ವಿಕ್ರಮಾಯನಮಃ
ಕ್ರಮಾಯನಮಃ ೮೦
ಅನುತ್ತಮಾಯನಮಃ
ದುರಾಧರ್ಷಾಯನಮಃ
ಕೃತಜ್ಞಾಯನಮಃ
ಕೃತಯೇನಮಃ
ಆತ್ಮವತೇನಮಃ
ಸುರೇಶಾಯನಮಃ
ಶರಣಾಯನಮಃ
ಶರ್ಮಣೇನಮಃ
ವಿಶ್ವರೇತಸೇನಮಃ
ಪ್ರಜಾಭವಾಯನಮಃ ೯೦
ಅಹ್ನೇನಮಃ
ಸಂವತ್ಸರಾಯನಮಃ
ವ್ಯಾಳಾಯನಮಃ
ಪ್ರತ್ಯಯಾಯನಮಃ
ಸರ್ವದರ್ಶನಾಯನಮಃ
ಅಜಾಯನಮಃ
ಸರ್ವೇಶ್ವರಾಯನಮಃ
ಸಿದ್ಧಾಯನಮಃ
ಸಿದ್ಧಯೇನಮಃ
ಸರ್ವಾದಯೇನಮಃ ೧೦೦
ಅಚ್ಯುತಾಯನಮಃ
ವೃಷಾಕಪಯೇನಮಃ
ಅಮೇಯಾತ್ಮನೇನಮಃ
ಸರ್ವಯೋಗವಿನಿಸ್ಸೃತಾಯನಮಃ
ವಸವೇನಮಃ

ವಸುಮನಸೇನಮಃ
ಸತ್ಯಾಯನಮಃ
ಸಮಾತ್ಮನೇನಮಃ
ಅಸಮ್ಮಿತಾಯನಮಃ
ಸಮಾಯನಮಃ ೧೦
ಅಮೋಘಾಯನಮಃ
ಪುಂಡರೀಕಾಕ್ಷಾಯನಮಃ
ವೃಷಕರ್ಮಣೇನಮಃ
ವೃಷಾಕೃತಯೇನಮಃ
ರುದ್ರಾಯ ನಮಃ
ಬಹುಶಿರಸೇನಮಃ
ಬಭ್ರವೇನಮಃ
ವಿಶ್ವಯೋನಯೇನಮಃ
ಶುಚಿಶ್ರವಸೇನಮಃ
ಅಮೃತಾಯನಮಃ ೨೦
ಶಾಶ್ವತಸ್ಥಾಣವೇನಮಃ
ವರಾರೋಹಾಯನಮಃ
ಮಹಾತಪಸೇನಮಃ
ಸರ್ವಗಾಯನಮಃ
ಸರ್ವವಿದ್ಭಾನವೇನಮಃ
ವಿಷ್ವಕ್ಸೇನಾಯನಮಃ
ಜನಾರ್ದನಾಯನಮಃ
ವೇದಾಯನಮಃ
ವೇದವಿದೇನಮಃ
ಅವ್ಯಂಗಾಯನಮಃ ೩೦
ವೇದಾಂಗಾಯನಮಃ
ವೇದವಿದೇನಮಃ
ಕವಯೇನಮಃ

ಲೋಕಾಧ್ಯಕ್ಷಾಯನಮಃ
ಸುರಾಧ್ಯಕ್ಷಾಯನಮಃ
ಧರ್ಮಾಧ್ಯಕ್ಷಾಯನಮಃ
ಕೃತಾಕೃತಾಯನಮಃ
ಚತುರಾತ್ಮನೇನಮಃ
ಚತುರ್ವ್ಯೂಹಾಯನಮಃ
ಚತುರ್ದಂಷ್ಟ್ರಾಯನಮಃ ೪೦
ಚತುರ್ಭುಜಾಯನಮಃ
ಭ್ರಾಜಿಷ್ಣವೇನಮಃ
ಭೋಜನಾಯನಮಃ
ಭೋಕ್ತ್ರೇನಮಃ
ಸಹಿಷ್ಣವೇನಮಃ
ಜಗದಾದಿಜಾಯನಮಃ
ಅನಘಾಯನಮಃ
ವಿಜಯಾಯನಮಃ
ಜೇತ್ರೇನಮಃ
ವಿಶ್ವಯೋನಯೇನಮಃ ೫೦
ಪುನರ್ವಸವೇನಮಃ
ಉಪೇಂದ್ರಾಯನಮಃ
ವಾಮನಾಯನಮಃ
ಪ್ರಾಂಶವೇನಮಃ
ಅಮೋಘಾಯನಮಃ
ಶುಚಯೇನಮಃ
ಊರ್ಜಿತಾಯನಮಃ
ಅತೀಂದ್ರಾಯನಮಃ
ಸಂಗ್ರಹಾಯನಮಃ
ಸರ್ಗಾಯನಮಃ ೬೦
ಧೃತಾತ್ಮನೇನಮಃ

ನಿಯಮಾಯನಮಃ
ಯಮಾಯನಮಃ
ವೇದ್ಯಾಯನಮಃ
ವೈದ್ಯಾಯನಮಃ
ಸದಾಯೋಗಿನೇನಮಃ
ವೀರಘ್ನೇನಮಃ
ಮಾಧವಾಯನಮಃ
ಮಧವೇನಮಃ
ಅತೀಂದ್ರಿಯಾಯನಮಃ ೭೦
ಮಹಾಮಾಯಾಯ
ಮಹೋತ್ಸಾಹಾಯ
ಮಹಾಬಲಾಯ
ಮಹಾಬುದ್ಧಯೆ
ಮಹಾವೀರ್ಯಾಯನಮಃ
ಮಹಾಶಕ್ತಯೇ
ಮಹಾದ್ಯುತಯೇ
ಅನಿರ್ದೇಶ್ಯವಪುಷೇ
ಶ್ರೀಮತೇ
ಅಮೇಯಾತ್ಮನೇನಮಃ ೮೦
ಮಹಾದ್ರಿಧೃತೇ
ಮಹೇಷ್ವಾಸಾಯ
ಮಹೀಭರ್ತ್ರೇ
ಶ್ರೀನಿವಾಸಾಯ
ಸತಾಂಗತಯೇನಮಃ
ಅನಿರುದ್ಧಾಯ
ಸುರಾನಂದಾಯ
ಗೋವಿಂದಾಯ
ಗೋವಿದಾಂಪತಯೇನಮಃ

ಮರೀಚಯೇನಮಃ ೯೦
ದಮನಾಯ
ಹಂಸಾಯ
ಸುಪರ್ಣಾಯ
ಭುಜಗೋತ್ತಮಾಯ
ಹಿರಣ್ಯನಾಭಾಯನಮಃ
ಸುತಪಸೇ
ಪದ್ಮನಾಭಾಯ
ಪ್ರಜಾಪತಯೇ
ಅಮೃತ್ಯವೇ
ಸರ್ವದೃಶೇನಮಃ ೧೦೦
ಸಿಂಹಾಯ
ಸಂಧಾತ್ರೇ
ಸಂಧಿಮತೇ
ಸ್ಥಿರಾಯ
ಅಜಾಯನಮಃ
ದುರ್ಮರ್ಷಣಾಯ
ಶಾಸ್ತ್ರೇ
ವಿಶ್ರುತಾತ್ಮನೇ
ಸುರಾರಿಘ್ನೇ
ಗುರುವೇನಮಃ ೧೧೦
ಗುರುತಮಾಯ
ಧಾಮ್ನೇ
ಸತ್ಯಾಯ
ಸತ್ಯಪರಾಕ್ರಮಾಯ
ನಿಮಿಷಾಯನಮಃ
ಅನಿಮಿಷಾಯ
ಸ್ರಗ್ವಿಣೇನಮಃ

ವಾಚಸ್ಪತಯೇ
ಉದಾರಧಿಯೇನಮಃ
ಅಗ್ರಣ್ಯೇನಮಃ ೨೦
ಗ್ರಾಮಣ್ಯೇನಮಃ
ಶ್ರೀಮತೇನಮಃ
ನ್ಯಾಯಾಯನಮಃ
ನೇತ್ರೇನಮಃ
ಸಮೀರಣಾಯನಮಃ
ಸಹಸ್ರಮೂರ್ಧ್ನೇನಮಃ
ವಿಶ್ವಾತ್ಮನೇನಮಃ
ಸಹಸ್ರಾಕ್ಷಾಯನಮಃ
ಸಹಸ್ರಪದೇನಮಃ
ಆವರ್ತನಾಯನಮಃ ೩೦
ನಿವೃತ್ತಾತ್ಮನೇನಮಃ
ಸಂವೃತಾಯನಮಃ
ಸಂಪ್ರಮರ್ದನಾಯನಮಃ
ಅಹಸ್ಸಂವರ್ತಕಾಯನಮಃ
ವಹ್ನಯೇನಮಃ
ಅನಿಲಾಯನಮಃ
ಧರಣೀಧರಾಯನಮಃ
ಸುಪ್ರಸಾದಾಯನಮಃ
ಪ್ರಸನ್ನಾತ್ಮನೇನಮಃ
ವಿಶ್ವಸೃಜೇನಮಃ ೪೦
ವಿಶ್ವಭುಗ್ವಿಭವೇನಮಃ
ಸತ್ಕರ್ತ್ರೇನಮಃ
ಸತ್ಕೃತಾಯನಮಃ
ಸಾಧವೇನಮಃ
ಜಹ್ನವೇನಮಃ

ನಾರಾಯಣಾಯನಮಃ
ನರಾಯನಮಃ
ಅಸಂಖ್ಯೇಯಾಯನಮಃ
ಅಪ್ರಮೇಯಾತ್ಮನೇನಮಃ
ವಿಶಿಷ್ಟಾಯನಮಃ ೫೦
ಶಿಷ್ಟಕೃತೇನಮಃ
ಶುಚಯೇನಮಃ
ಸಿದ್ಧಾರ್ಥಾಯನಮಃ
ಸಿದ್ಧಸಙ್ಕಲ್ಪಾಯನಮಃ
ಸಿದ್ಧಿದಾಯನಮಃ
ಸಿದ್ಧಿಸಾಧನಾಯನಮಃ
ವೃಷಾಹಿಣೇನಮಃ
ವೃಷಭಾಯನಮಃ
ವಿಷ್ಣವೇನಮಃ
ವೃಷಪರ್ವಣೇನಮಃ ೬೦
ವೃಷೋದರಾಯನಮಃ
ವರ್ಧನಾಯನಮಃ
ವರ್ಧಮಾನಾಯನಮಃ
ವಿವಿಕ್ತಾಯನಮಃ
ಶ್ರುತಿಸಾಗರಾಯನಮಃ
ಸುಭುಜಾಯನಮಃ
ದುರ್ಧರಾಯನಮಃ
ವಾಗ್ಮಿನೇನಮಃ
ಮಹೇನ್ದ್ರಾಯನಮಃ
ವಸುದಾಯನಮಃ ೭೦
ವಸವೇನಮಃ
ನೈಕರೂಪಾಯನಮಃ
ಬೃಹದ್ರೂಪಾಯನಮಃ

ಶಿಪಿವಿಷ್ಟಾಯನಮಃ
ಪ್ರಕಾಶನಾಯನಮಃ
ಓಜಸ್ತೇಜೋದ್ಯುತಿಧರಾಯನಮಃ
ಪ್ರಕಾಶಾತ್ಮನೇನಮಃ
ಪ್ರತಾಪನಾಯನಮಃ
ಋದ್ಧಾಯನಮಃ
ಸ್ಪಷ್ಟಾಕ್ಷರಾಯನಮಃ ೮೦
ಮನ್ತ್ರಾಯನಮಃ
ಚನ್ದ್ರಾಂಶವೇನಮಃ
ಭಾಸ್ಕರದ್ಯುತಯೇನಮಃ
ಅಮೃತಾಂಶೂದ್ಭವಾಯಃ
ಭಾನವೇನಮಃ
ಶಶಬಿನ್ದವೇನಮಃ
ಸುರೇಶ್ವರಾಯನಮಃ
ಔಷಧಾಯನಮಃ
ಜಗತಸ್ಸೇತವೇನಮಃ
ಸತ್ಯಧರ್ಮಪರಾಕ್ರಮಾಯ ೯೦
ಭೂತಭವ್ಯಭವನ್ನಾಥಾಯನಮಃ
ಪವನಾಯನಮಃ
ಪಾವನಾಯನಮಃ
ಅನಲಾಯನಮಃ
ಕಾಮಘ್ನೇನಮಃ
ಕಾಮಕೃತೇನಮಃ
ಕಾನ್ತಾಯನಮಃ
ಕಾಮಾಯನಮಃ
ಕಾಮಪ್ರದಾಯನಮಃ
ಪ್ರಭವೇನಮಃ ೧೦೦
ಯುಗಾದಿಕೃತೇನಮಃ

ಯುಗಾವರ್ತಾಯನಮಃ
ನೈಕಮಾಯಾಯನಮಃ
ಮಹಾಶನಾಯನಮಃ
ಅದೃಶ್ಯಾಯನಮಃ
ವ್ಯಕ್ತರೂಪಾಯನಮಃ
ಸಹಸ್ರಜಿತೇನಮಃ
ಅನನ್ತಜಿತೇನಮಃ
ಇಷ್ಟಾಯನಮಃ
ಅವಿಶಿಷ್ಟಾಯನಮಃ ೧೦
ಶಿಷ್ಟೇಷ್ಟಾಯನಮಃ
ಶಿಖಣ್ಡಿನೇನಮಃ
ನಹುಷಾಯನಮಃ
ವೃಷಾಯನಮಃ
ಕ್ರೋಧಘ್ನೇನಮಃ
ಕ್ರೋಧಕೃತೇನಮಃ
ಕರ್ತ್ರೇನಮಃ
ವಿಶ್ವಬಾಹವೇನಮಃ
ಮಹೀಧರಾಯನಮಃ
ಅಚ್ಯುತಾಯನಮಃ ೨೦
ಪ್ರಥಿತಾಯನಮಃ
ಪ್ರಾಣಾಯನಮಃ
ಪ್ರಾಣದಾಯನಮಃ
ವಾಸವಾನುಜಾಯನಮಃ
ಅಪಾಂನಿಧಯೇನಮಃ
ಅಧಿಷ್ಠಾನಾಯನಮಃ
ಅಪ್ರಮತ್ತಾಯನಮಃ
ಪ್ರತಿಷ್ಠಿತಾಯನಮಃ
ಸ್ಕನ್ದಾಯನಮಃ

ಸ್ಕಂದಧರಾಯನಮಃ ೩೦
ಧುರ್ಯಾಯನಮಃ
ವರದಾಯನಮಃ
ವಾಯುವಾಹನಾಯನಮಃ
ವಾಸುದೇವಾಯನಮಃ
ಬೃಹದ್ಭಾನವೇನಮಃ
ಆದಿದೇವಾಯನಮಃ
ಪುರಂದರಾಯನಮಃ
ಅಶೋಕಾಯನಮಃ
ತಾರಣಾಯನಮಃ
ತಾರಾಯನಮಃ ೪೦
ಶೂರಾಯನಮಃ
ಶೌರಯೇನಮಃ
ಜನೇಶ್ವರಾಯನಮಃ
ಅನುಕೂಲಾಯನಮಃ
ಶತಾವರ್ತಾಯನಮಃ
ಪದ್ಮಿನೇನಮಃ
ಪದ್ಮನಿಭೇಕ್ಷಣಾಯನಮಃ
ಪದ್ಮನಾಭಾಯನಮಃ
ಅರವಿಂದಾಕ್ಷಾಯನಮಃ
ಪದ್ಮಗರ್ಭಾಯನಮಃ ೫೦
ಶರೀರಭೃತೇನಮಃ
ಮಹರ್ಧಯೇನಮಃ
ಋದ್ಧಾಯನಮಃ
ವೃದ್ಧಾತ್ಮನೇನಮಃ
ಮಹಾಕ್ಷಾಯನಮಃ
ಗರುಡಧ್ವಜಾಯನಮಃ
ಅತುಲಾಯನಮಃ
ಶರಭಾಯನಮಃ
ಭೀಮಾಯನಮಃ
ಸಮಯಜ್ಞಾಯನಮಃ ೬೦
ಹವಿರ್ಹರಯೇನಮಃ
ಸರ್ವಲಕ್ಷಣಲಕ್ಷಣ್ಯಾಯನಮಃ
ಲಕ್ಷ್ಮೀಪತೇನಮಃ
ಸಮಿತಿಂಜಯಾಯನಮಃ
ವಿಕ್ಷರಾಯನಮಃ
ರೋಹಿತಾಯನಮಃ
ಮಾರ್ಗಾಯನಮಃ
ಹೇತವೇನಮಃ
ದಾಮೋದರಾಯನಮಃ
ಸಹಾಯನಮಃ ೭೦
ಮಹೀಧರಾಯನಮಃ
ಮಹಾಭಾಗಾಯನಮಃ
ವೇಗವತೇನಮಃ
ಅಮಿತಾಶನಾಯನಮಃ
ಉದ್ಭವಾಯನಮಃ
ಕ್ಷೋಭಣಾಯನಮ
ದೇವಾಯನಮಃ
ಶ್ರೀಗರ್ಭಾಯನಮಃ
ಪರಮೇಶ್ವರಾಯನಮಃ
ಕರಣಾಯನಮಃ ೮೦
ಕಾರಣಾಯನಮಃ
ಕರ್ತ್ರೇನಮಃ
ವಿಕರ್ತ್ರೇನಮಃ
ಗಹನಾಯನಮಃ
ಗುಹಾಯನಮಃ
ವ್ಯವಸಾಯಾಯನಮಃ

ವ್ಯವಸ್ಥಾಯನಮಃ
ಸಂಸ್ಥಾನಾಯನಮಃ
ಸ್ಥಾನದಾಯನಮಃ
ಧ್ರುವಾಯನಮಃ ೯೦
ಪರರ್ಧಯೇನಮಃ
ಪರಮಸ್ಪಷ್ಟಾಯನಮಃ
ತುಷ್ಟಾಯನಮಃ
ಪುಷ್ಟಾಯನಮಃ
ಶುಭೇಕ್ಷಣಾಯನಮಃ
ರಾಮಾಯನಮಃ
ವಿರಾಮಾಯನಮಃ
ವಿರಜಸೇನಮಃ
ಮಾರ್ಗಾಯನಮಃ
ನೇಯಾಯನಮಃ ೪೦೦
ನಯಾಯನಮಃ
ಅನಯಾಯನಮಃ
ವೀರಾಯನಮಃ
ಶಕ್ತಿಮತಾಂ ಶ್ರೇಷ್ಠಾಯನಮಃ
ಧರ್ಮಾಯನಮಃ
ಧರ್ಮವಿದುತ್ತಮಾಯನಮಃ
ವೈಕುಂಠಾಯನಮಃ
ಪುರುಷಾಯನಮಃ
ಪ್ರಾಣಾಯನಮಃ
ಪ್ರಾಣದಾಯನಮಃ ೧೦
ಪ್ರಣವಾಯನಮಃ
ಪೃಥವೇನಮಃ
ಹಿರಣ್ಯಗರ್ಭಾಯನಮಃ
ಶತ್ರುಘ್ನಾಯನಮಃ

ವ್ಯಾಪ್ತಾಯ
ವಾಯವೇನಮಃ
ಅಧೋಕ್ಷಜಾಯನಮಃ
ಋತವೇನಮಃ
ಸುದರ್ಶನಾಯನಮಃ
ಕಾಲಾಯನಮಃ ೨೦
ಪರಮೇಷ್ಠಿನೇನಮಃ
ಪರಿಗ್ರಹಾಯನಮಃ
ಉಗ್ರಾಯನಮಃ
ಸಂವತ್ಸರಾಯನಮಃ
ದಕ್ಷಾಯನಮಃ
ವಿಶ್ರಾಮಾಯನಮಃ
ವಿಶ್ವದಕ್ಷಿಣಾಯನಮಃ
ವಿಸ್ತಾರಾಯನಮಃ
ಸ್ಥಾವರಸ್ಥಾಣವೇನಮಃ
ಪ್ರಮಾಣಾಯನಮಃ ೩೦
ಅವ್ಯಯಾಯ ಬೀಜಾಯನಮಃ
ಅರ್ಥಾಯನಮಃ
ಅನರ್ಥಾಯನಮಃ
ಮಹಾಕೋಶಾಯನಮಃ
ಮಹಾಭೋಗಾಯನಮಃ
ಮಹಾಧನಾಯನಮಃ
ಅನಿರ್ವಿಣ್ಣಾಯನಮಃ
ಸ್ಥವಿಷ್ಠಾಯನಮಃ
ಅಭುವೇನಮಃ (ಭುವೆ)
ಧರ್ಮಯೂಪಾಯನಮಃ ೪೦
ಮಹಾಮಖಾಯನಮಃ
ನಕ್ಷತ್ರನೇಮಯೇನಮಃ

ನಕ್ಷತ್ರಿಣೇನಮಃ
ಕ್ಷಮಾಯನಮಃ
ಕ್ಷಾಮಾಯನಮಃ
ಸಮೀಹನಾಯನಮಃ
ಯಜ್ಞಾಯನಮಃ
ಇಜ್ಯಾಯನಮಃ
ಮಹೇಜ್ಯಾಯನಮಃ
ಕ್ರತವೇನಮಃ ೫೦
ಸತ್ರಾಯನಮಃ
ಸತಾಂಗತಯೇನಮಃ
ಸರ್ವದರ್ಶಿನೇನಮಃ
ವಿಮುಕ್ತಾತ್ಮನೇನಮಃ
ಸರ್ವಜ್ಞಾಯನಮಃ
ಉತ್ತಮಜ್ಞಾನಾಯನಮಃ
ಸುವ್ರತಾಯನಮಃ
ಸುಮುಖಾಯನಮಃ
ಸೂಕ್ಷ್ಮಾಯನಮಃ
ಸುಘೋಷಾಯನಮಃ ೬೦
ಸುಖದಾಯನಮಃ
ಸುಹೃದೇನಮಃ
ಮನೋಹರಾಯನಮಃ
ಜಿತಕ್ರೋಧಾಯನಮಃ
ವೀರಬಾಹವೇನಮಃ
ವಿದಾರಣಾಯನಮಃ
ಸ್ವಾಪನಾಯನಮಃ
ಸ್ವವಶಾಯನಮಃ
ವ್ಯಾಪಿನೇನಮಃ
ನೈಕಾತ್ಮನೇನಮಃ ೭೦
ನೈಕಕರ್ಮಕೃತೇನಮಃ
ವತ್ಸರಾಯನಮಃ
ವತ್ಸಲಾಯನಮಃ
ವತ್ಸಿನೇನಮಃ
ರತ್ನಗರ್ಭಾಯನಮಃ
ಧನೇಶ್ವರಾಯನಮಃ
ಧರ್ಮಗುಪೇನಮಃ
ಧರ್ಮಕೃತೇನಮಃ
ಧರ್ಮಿಣೇನಮಃ
ಸತೇನಮಃ ೮೦
ಅಸತೇನಮಃ
ಕ್ಷರಾಯನಮಃ
ಅಕ್ಷರಾಯನಮಃ
ಅವಿಜ್ಞಾತ್ರೇನಮಃ
ಸಹಸ್ರಾಂಶವೇನಮಃ
ವಿಧಾತ್ರೇನಮಃ
ಕೃತಲಕ್ಷಣಾಯನಮಃ
ಗಭಸ್ತಿನೇಮಯೇನಮಃ
ಸತ್ವಸ್ಥಾಯನಮಃ
ಸಿಂಹಾಯನಮಃ ೯೦
ಭೂತಮಹೇಶ್ವರಾಯನಮಃ
ಆದಿದೇವಾಯನಮಃ
ಮಹಾದೇವಾಯನಮಃ
ದೇವೇಶಾಯನಮಃ
ದೇವಭೃದ್ಗುರವೇನಮಃ
ಉತ್ತರಾಯನಮಃ
ಗೋಪತಯೇನಮಃ
ಗೋಪ್ತ್ರೇನಮಃ

ಜ್ಞಾನಗಮ್ಯಾಯನಮಃ
ಪುರಾತನಾಯನಮಃ ೫೦೦
ಶರೀರಭೂತಭೃತೇನಮಃ
ಭೋಕ್ತ್ರೇನಮಃ
ಕಪೀನ್ದ್ರಾಯನಮಃ
ಭೂರಿದಕ್ಷಿಣಾಯನಮಃ
ಸೋಮಪಾಯನಮಃ
ಅಮೃತಪಾಯನಮಃ
ಸೋಮಾಯನಮಃ
ಪುರುಜಿತೇನಮಃ
ಪುರುಸತ್ತಮಾಯನಮಃ
ವಿನಯಾಯನಮಃ ೧೦
ಜಯಾಯನಮಃ
ಸತ್ಯಸಂಧಾಯನಮಃ
ದಾಶಾರ್ಹಾಯನಮಃ
ಸಾತ್ವತಾಂಪತಯೇನಮಃ
ಜೀವಾಯನಮಃ
ಸಾಕ್ಷಿಣೇವಿನಯಿತೇನಮಃ
ಮುಕುಂದಾಯನಮಃ
ಅಮಿತವಿಕ್ರಮಾಯನಮಃ
ಅಂಭೋನಿಧಯೇನಮಃ ೨೦
ಅನನ್ತಾತ್ಮನೇನಮಃ
ಮಹೋದಧಿಶಯಾಯನಮಃ
ಅಂತಕಾಯನಮಃ
ಅಜಾಯನಮಃ
ಮಹಾರ್ಹಾಯನಮಃ
ಸ್ವಾಭಾವ್ಯಾಯನಮಃ
ಜಿತಾಮಿತ್ರಾಯನಮಃ
ಪ್ರಮೋದನಾಯನಮಃ
ಆನಂದಾಯನಮಃ
ನಂದನಾಯನಮಃ ೩೦
ನಂದಾಯನಮಃ
ಸತ್ಯಧರ್ಮಣೇನಮಃ
ತ್ರಿವಿಕ್ರಮಾಯನಮಃ
ಮಹರ್ಷಯೇಕಪಿಲಾಚಾರ್ಯಾಯನ
ಕೃತಜ್ಞಾಯನಮಃ
ಮೇದಿನೀಪತಯೇನಮಃ
ತ್ರಿಪದಾಯನಮಃ
ತ್ರಿದಶಾಧ್ಯಕ್ಷಾಯನಮಃ
ಮಹಾಶೃಂಗಾಯನಮಃ
ಕೃತಾಂತಕೃತೇನಮಃ ೪೦
ಮಹಾವರಾಹಾಯನಮಃ
ಗೋವಿಂದಾಯನಮಃ
ಸುಷೇಣಾಯನಮಃ
ಕನಕಾಂಗದಿನೇನಮಃ
ಗುಹ್ಯಾಯನಮಃ
ಗಭೀರಾಯನಮಃ
ಗಹನಾಯನಮಃ
ಗುಪ್ತಾಯನಮಃ
ಚಕ್ರಗದಾಧರಾಯನಮಃ
ವೇಧಸೇನಮಃ ೫೦
ಸ್ವಾಂಗಾಯನಮಃ
ಅಜಿತಾಯನಮಃ
ಕೃಷ್ಣಾಯನಮಃ
ದೃಢಾಯನಮಃ
ಸಂಕರ್ಷಣಾಯಾಚ್ಯುತಾಯನಮಃ

ವರುಣಾಯನಮಃ
ವಾರುಣಾಯನಮಃ
ವೃಕ್ಷಾಯನಮಃ
ಪುಷ್ಕರಾಕ್ಷಾಯನಮಃ
ಮಹಾಮನಸೇನಮಃ ೬೦
ಭಗವತೇನಮಃ
ಭಗಘ್ನೇನಮಃ
ಆನಂದಿನೇನಮಃ
ವನಮಾಲಿನೇನಮಃ
ಹಲಾಯುಧಾಯನಮಃ
ಆದಿತ್ಯಾಯನಮಃ
ಜ್ಯೋತಿರಾದಿತ್ಯಾಯನಮಃ
ಸಹಿಷ್ಣವೇನಮಃ
ಗತಿಸತ್ತಮಾಯನಮಃ
ಸುಧನ್ವನೇನಮಃ ೭೦
ಖಂಡಪರಶವೇನಮಃ
ದಾರುಣಾಯನಮಃ
ದ್ರವಿಣಪ್ರದಾಯನಮಃ
ದಿವಿಸ್ಪೃಶೇನಮಃ
ಸರ್ವದೃಗ್ವ್ಯಾಸಾಯನಮಃ
ವಾಚಸ್ಪತಯೆಯೋನಿಜಾಯನಮಃ
ತ್ರಿಸಾಮ್ನೇನಮಃ
ಸಾಮಗಾಯನಮಃ
ಸಾಮ್ನೇನಮಃ
ನಿರ್ವಾಣಾಯನಮಃ ೮೦
ಭೇಷಜಾಯನಮಃ
ಭಿಷಜೇನಮಃ

ಸನ್ಯಾಸಕೃತೇನಮಃ
ಶಮಾಯನಮಃ
ಶಾಂತಾಯನಮಃ
ನಿಷ್ಠಾಯೈನಮಃ
ಶಾಂತಯೇನಮಃ
ಪರಾಯಣಾಯನಮಃ
ಶುಭಾಂಗಾಯನಮಃ
ಶಾಂತಿದಾಯನಮಃ ೯೦
ಸ್ರಷ್ಟ್ರೇನಮಃ
ಕುಮುದಾಯನಮಃ
ಕುವಲೇಶಯಾಯನಮಃ
ಗೋಹಿತಾಯನಮಃ
ಗೋಪತಯೇನಮಃ
ಗೋಪ್ತ್ರೇನಮಃ
ವೃಷಭಾಕ್ಷಾಯನಮಃ
ವೃಷಪ್ರಿಯಾಯನಮಃ
ಅನಿವರ್ತಿನೇನಮಃ
ನಿವೃತ್ತಾತ್ಮನೇನಮಃ ೧೦೦
ಸಂಕ್ಷೇಪ್ತ್ರೇನಮಃ
ಕ್ಷೇಮಕೃತೇನಮಃ
ಶಿವಾಯನಮಃ
ಶ್ರೀವತ್ಸವಕ್ಷಸೇನಮಃ
ಶ್ರೀವಾಸಾಯನಮಃ
ಶ್ರೀಪತಯೇನಮಃ
ಶ್ರೀಮತಾಂ ವರಾಯನಮಃ
ಶ್ರೀದಾಯನಮಃ
ಶ್ರೀಶಾಯನಮಃ
ಶ್ರೀನಿವಾಸಾಯನಮಃ ೧೦

ಶ್ರೀನಿಧಯೇನಮಃ
ಶ್ರೀವಿಭಾವನಾಯನಮಃ
ಶ್ರೀಧರಾಯನಮಃ
ಶ್ರೀಕರಾಯನಮಃ
ಶ್ರೇಯಸೇನಮಃ
ಶ್ರೀಮತೇನಮಃ
ಲೋಕತ್ರಯಾಶ್ರಯಾಯನಮಃ
ಸ್ವಕ್ಷಾಯನಮಃ
ಸ್ವಂಗಾಯನಮಃ
ಶತಾನನ್ದಾಯನಮಃ ೨೦
ನನ್ದಯೇನಮಃ
ಜ್ಯೋತಿರ್ಗಣೇಶ್ವರಾಯನಮಃ
ವಿಜಿತಾತ್ಮನೇನಮಃ
ಅವಿಧೇಯಾತ್ಮನೇನಮಃ
ಸತ್ಕೀರ್ತಯೇನಮಃ
ಛಿನ್ನಸಂಶಯಾಯನಮಃ
ಉದೀರ್ಣಾಯನಮಃ
ಸರ್ವತಶ್ಚಕ್ಷುಷೇನಮಃ
ಅನೀಶಾಯನಮಃ
ಶಾಶ್ವತಸ್ಥಿರಾಯನಮಃ ೩೦
ಭೂಶಯಾಯನಮಃ
ಭೂಷಣಾಯನಮಃ
ಭೂತಯೇನಮಃ
ವಿಶೋಕಾಯನಮಃ
ಶೋಕನಾಶನಾಯನಮಃ
ಅರ್ಚಿಷ್ಮತೇನಮಃ
ಅರ್ಚಿತಾಯನಮಃ
ಕುಮ್ಭಾಯನಮಃ
ವಿಶುದ್ಧಾತ್ಮನೇನಮಃ
ವಿಶೋಧನಾಯನಮಃ ೪೦
ಅನಿರುದ್ಧಾಯನಮಃ
ಅಪ್ರತಿರಥಾಯನಮಃ
ಪ್ರದ್ಯುಮ್ನಾಯನಮಃ
ಅಮಿತವಿಕ್ರಮಾಯನಮಃ
ಕಾಲನೇಮಿನಿಘ್ನೇನಮಃ
ಶೌರಯೇನಮಃ
ಶೂರಾಯನಮಃ
ಶೂರಜನೇಶ್ವರಾಯನಮಃ
ತ್ರಿಲೋಕಾತ್ಮನೇನಮಃ
ತ್ರಿಲೋಕೇಶಾಯನಮಃ ೫೦
ಕೇಶವಾಯನಮಃ
ಕೇಶಿಘ್ನೇನಮಃ
ಹರಯೇನಮಃ
ಕಾಮದೇವಾಯನಮಃ
ಕಾಮಪಾಲಾಯನಮಃ
ಕಾಮಿನೇನಮಃ
ಕಾಂತಾಯನಮಃ
ಕೃತಾಗಮಾಯನಮಃ
ಅನಿರ್ದೇಶ್ಯವಪುಷೇನಮಃ
ವಿಷ್ಣವೇನಮಃ ೬೦
ವೀರಾಯನಮಃ
ಅನನ್ತಾಯನಮಃ
ಧನಞ್ಜಯಾಯನಮಃ
ಬ್ರಹ್ಮಣ್ಯಾಯನಮಃ
ಬ್ರಹ್ಮಕೃತೇನಮಃ
ಬ್ರಹ್ಮಣೇನಮಃ

ಬ್ರಹ್ಮಣೇನಮಃ
ಬ್ರಹ್ಮವಿವರ್ಧನಾಯನಮಃ
ಬ್ರಹ್ಮವಿದೇನಮಃ
ಬ್ರಾಹ್ಮಣಾಯನಮಃ ೭೦
ಬ್ರಹ್ಮಿಣೇನಮಃ
ಬ್ರಹ್ಮಜ್ಞಾಯನಮಃ
ಬ್ರಾಹ್ಮಣಪ್ರಿಯಾಯನಮಃ
ಮಹಾಕ್ರಮಾಯನಮಃ
ಮಹಾಕರ್ಮಣೇನಮಃ
ಮಹಾತೇಜಸೇನಮಃ
ಮಹೋರಗಾಯನಮಃ
ಮಹಾಕ್ರತವೇನಮಃ
ಮಹಾಯಜ್ವನೇನಮಃ
ಮಹಾಯಜ್ಞಾಯನಮಃ ೮೦
ಮಹಾಹವಿಷೇನಮಃ
ಸ್ತವ್ಯಾಯನಮಃ
ಸ್ತವಪ್ರಿಯಾಯನಮಃ
ಸ್ತೋತ್ರಾಯನಮಃ
ಸ್ತುತಯೇನಮಃ
ಸ್ತೋತ್ರೇನಮಃ
ರಣಪ್ರಿಯಾಯನಮಃ
ಪೂರ್ಣಾಯನಮಃ
ಪೂರಯಿತ್ರೇನಮಃ
ಪುಣ್ಯಾಯನಮಃ ೯೦
ಪುಣ್ಯಕೀರ್ತಯೇನಮಃ
ಅನಾಮಯಾಯನಮಃ
ಮನೋಜವಾಯನಮಃ
ತೀರ್ಥಕರಾಯನಮಃ
ವಸುರೇತಸೇನಮಃ
ವಸುಪ್ರದಾಯನಮಃ
ವಸುಪ್ರದಾಯ ನಮಃ
ವಾಸುದೇವಾಯನಮಃ
ವಸವೇನಮಃ
ವಸುಮನಸೇನಮಃ ೨೦೦
ಹವಿಷೇನಮಃ
ಸದ್ಗತಯೇನಮಃ
ಸತ್ಕೃತಯೇನಮಃ
ಸತ್ತಾಯೈನಮಃ
ಸದ್ಭೂತಯೇನಮಃ
ಸತ್ಪರಾಯಣಾಯನಮಃ
ಶೂರಸೇನಾಯನಮಃ
ಯದುಶ್ರೇಷ್ಠಾಯನಮಃ
ಸನ್ನಿವಾಸಾಯನಮಃ
ಸುಯಾಮುನಾಯನಮಃ ೧೦
ಭೂತಾವಾಸಾಯನ
ವಾಸುದೇವಾಯನಮಃ
ಸರ್ವಾಸುನಿಲಯಾಯನಮಃ
ಅನಲಾಯನಮಃ
ದರ್ಪಘ್ನೇನಮಃ
ದರ್ಪದಾಯನಮಃ
ದೃಪ್ತಾಯನಮಃ
ದುರ್ಧರಾಯನಮಃ
ಅಪರಾಜಿತಾಯನಮಃ
ವಿಶ್ವಮೂರ್ತಯೇನಮಃ ೨೦
ಮಹಾಮೂರ್ತಯೇನಮಃ
ದೀಪ್ತಮೂರ್ತಯೇನಮಃ

ಅಮೂರ್ತಿಮತೇನಮಃ
ಅನೇಕಮೂರ್ತಯೇನಮಃ
ಅವ್ಯಕ್ತಾಯನಮಃ
ಶತಮೂರ್ತಯೇನಮಃ
ಶತಾನನಾಯನಮಃ
ಏಕಸ್ಮೈನಮಃ
ನೈಕಾಯನಮಃ
ಸವಾಯನಮಃ
ಕಾಯನಮಃ ೭೦
ಕಸ್ಮೈನಮಃ
ಯಸ್ಮೈನಮಃ
ತಸ್ಮೈನಮಃ
ಅನುತ್ತಮಾಯಪದಾಯನಮಃ
ಲೋಕಬಂಧವೇನಮಃ
ಲೋಕನಾಥಾಯನಮಃ
ಮಾಧವಾಯನಮಃ
ಭಕ್ತವತ್ಸಲಾಯನಮಃ
ಸುವರ್ಣವರ್ಣಾಯನಮಃ
ಹೇಮಾಂಗಾಯನಮಃ ೮೦
ವರಾಂಗಾಯನಮಃ
ಚಂದನಾಂಗದಿನೇನಮಃ
ವೀರಘ್ನೇನಮಃ
ವಿಷಮಾಯನಮಃ
ಶೂನ್ಯಾಯನಮಃ
ಘೃತಾಶಿಷೇನಮಃ
ಅಚಲಾಯನಮಃ
ಚಲಾಯನಮಃ
ಅಮಾನಿನೇನಮಃ
ಮಾನದಾಯನಮಃ ೯೦

ಮಾನ್ಯಾಯನಮಃ
ಲೋಕಸ್ವಾಮಿನೇನಮಃ
ತ್ರಿಲೋಕಧೃತೇನಮಃ
ಸುಮೇಧಸೇನಮಃ
ಮೇಧಜಾಯನಮಃ
ಧನ್ಯಾಯನಮಃ
ಸತ್ಯಮೇಧಸೇನಮಃ
ಧರಾಧರಾಯನಮಃ
ತೇಜೋವೃಷಾಯನಮಃ
ದ್ಯುತಿಧರಾಯನಮಃ ೬೦
ಸರ್ವಶಸ್ತ್ರಭೃತಾಂವರಾಯನಮಃ
ಪ್ರಗ್ರಹಾಯನಮಃ
ನಿಗ್ರಹಾಯನಮಃ
ವ್ಯಗ್ರಾಯನಮಃ
ನೈಕಶೃಂಗಾಯನಮಃ
ಗದಾಗ್ರಜಾಯನಮಃ
ಚತುರ್ಮೂರ್ತಯೇನಮಃ
ಚತುರ್ಬಾಹವೇನಮಃ
ಚತುರ್ವ್ಯೂಹಾಯನಮಃ
ಚತುರ್ಗತಯೇನಮಃ ೭೦
ಚತುರಾತ್ಮನೇನಮಃ
ಚತುರ್ಭಾವಾಯನಮಃ
ಚತುರ್ವೇದವಿದೇನಮಃ
ಏಕಪದೇನಮಃ
ಸಮಾವರ್ತಾಯನಮಃ
ಅನಿವೃತ್ತಾತ್ಮನೇನಮಃ
ದುರ್ಜಯಾಯನಮಃ

ದುರತಿಕ್ರಮಾಯನಮಃ
ದುರ್ಲಭಾಯನಮಃ
ದುರ್ಗಮಾಯನಮಃ ೬೦
ದುರ್ಗಾಯನಮಃ
ದುರಾವಾಸಾಯನಮಃ
ದುರಾರಿಘ್ನೇನಮಃ
ಶುಭಾಂಗಾಯನಮಃ
ಲೋಕಸಾರಂಗಾಯನಮಃ
ಸುತಂತವೇನಮಃ
ತಂತುವರ್ಧನಾಯನಮಃ
ಇಂದ್ರಕರ್ಮಣೇನಮಃ
ಮಹಾಕರ್ಮಣೇನಮಃ
ಕೃತಕರ್ಮಣೇನಮಃ ೭೦
ಕೃತಾಗಮಾಯನಮಃ
ಉದ್ಭವಾಯನಮಃ
ಸುಂದರಾಯನಮಃ
ಸುಂದಾಯನಮಃ
ರತ್ನನಾಭಾಯನಮಃ
ಸುಲೋಚನಾಯನಮಃ
ಅರ್ಕಾಯನಮಃ
ವಾಜಸನಾಯನಮಃ
ಶೃಙ್ಗಿಣೇನಮಃ
ಜಯನ್ತಾಯನಮಃ ೮೦೦
ಸರ್ವವಿಜ್ಜಯಿನೇನಮಃ
ಸುವರ್ಣಬಿನ್ದವೇನಮಃ
ಅಕ್ಷೋಭ್ಯಾಯನಮಃ
ಸರ್ವವಾಗೀಶ್ವರೇಶ್ವರಾಯನಮಃ
ಮಹಾಹ್ರದಾಯನಮಃ

ಮಹಾಗರ್ತಾಯನಮಃ
ಮಹಾಭೂತಾಯನಮಃ
ಮಹಾನಿಧಯೇನಮಃ
ಕುಮುದಾಯನಮಃ
ಕುನ್ದರಾಯನಮಃ ೧೦
ಕುನ್ದಾಯನಮಃ
ಪರ್ಜನ್ಯಾಯನಮಃ
ಪಾವನಾಯನಮಃ
ಅನಿಲಾಯನಮಃ
ಅಮೃತಾಶಾಯನಮಃ
ಅಮೃತವಪುಷೇನಮಃ
ಸರ್ವಜ್ಞಾಯನಮಃ
ಸರ್ವತೋಮುಖಾಯನಮಃ
ಸುಲಭಾಯನಮಃ
ಸುವ್ರತಾಯನಮಃ ೨೦
ಸಿದ್ಧಾಯನಮಃ
ಶತ್ರುಜಿತೇನಮಃ
ಶತ್ರುತಾಪನಾಯನಮಃ
ನ್ಯಗ್ರೋಧಾಯನಮಃ
ಉದುಂಬರಾಯನಮಃ
ಅಶ್ವತ್ಥಾಯನಮಃ
ಚಾಣೂರಾಂಧ್ರನಿಷೂದಿನೇನಮಃ
ಸಹಸ್ರಾರ್ಚಿಷೇನಮಃ
ಸಪ್ತಜಿಹ್ವಾಯನಮಃ
ಸಪ್ತೈಧಸೇನಮಃ ೩೦
ಸಪ್ತವಾಹನಾಯನಮಃ
ಅಮೂರ್ತಯೇನಮಃ
ಅನಘಾಯನಮಃ

ಅಚಿನ್ತ್ಯಾಯನಮಃ
ಭಯಕೃತೇನಮಃ
ಭಯನಾಶನಾಯನಮಃ
ಅಣವೇನಮಃ
ಬೃಹತೇನಮಃ
ಕೃಶಾಯನಮಃ
ಸ್ಥೂಲಾಯನಮಃ ೪೦
ಗುಣಭೃತೇನಮಃ
ನಿರ್ಗುಣಾಯನಮಃ
ಮಹತೇನಮಃ
ಅಧೃತಾಯನಮಃ
ಸ್ವಧೃತಾಯನಮಃ
ಸ್ವಾಸ್ಯಾಯನಮಃ
ಪ್ರಾಗ್ವಂಶಾಯನಮಃ
ವಂಶವರ್ಧನಾಯನಮಃ
ಭಾರಭೃತೇನಮಃ
ಕಥಿತಾಯನಮಃ ೫೦
ಯೋಗಿನೇನಮಃ
ಯೋಗೀಶಾಯನಮಃ
ಸರ್ವಕಾಮದಾಯನಮಃ
ಆಶ್ರಮಾಯನಮಃ
ಶ್ರಮಣಾಯನಮಃ
ಕ್ಷಾಮಾಯನಮಃ
ಸುಪರ್ಣಾಯನಮಃ
ವಾಯುವಾಹನಾಯನಮಃ
ಧನುರ್ಧರಾಯನಮಃ
ಧನುರ್ವೇದಾಯನಮಃ ೬೦
ದಣ್ಡಾಯನಮಃ

ದಮಯಿತ್ರೇನಮಃ
ದಮಾಯನಮಃ
ಅಪರಾಜಿತಾಯನಮಃ
ಸರ್ವಸಹಾಯನಮಃ
ನಿಯನ್ತ್ರೇನಮಃ
ಅನಿಯಮಾಯ ನಿಯನಮಃ
ಅಯಮಾಯನಮಃ ೭೦
ಸತ್ವವತೇನಮಃ
ಸಾತ್ವಿಕಾಯನಮಃ
ಸತ್ಯಾಯನಮಃ
ಸತ್ಯಧರ್ಮಪರಾಯಣಾಯನಮಃ
ಅಭಿಪ್ರಾಯಾಯನಮಃ
ಪ್ರಿಯಾರ್ಹಾಯನಮಃ
ಅರ್ಹಾಯನಮಃ
ಪ್ರಿಯಕೃತೇನಮಃ
ಪ್ರೀತಿವರ್ಧನಾಯನಮಃ
ವಿಹಾಯಸಗತಯೇನಮಃ
ಜ್ಯೋತಿಷೇನಮಃ
ಸುರುಚಯೇನಮಃ ೮೦
ಹುತಭುಜೇನಮಃ
ವಿಭವೇನಮಃ
ರವಯೇನಮಃ
ವಿರೋಚನಾಯನಮಃ
ಸೂರ್ಯಾಯನಮಃ
ಸವಿತ್ರೇನಮಃ
ರವಿಲೋಚನಾಯನಮಃ
ಅನನ್ತಾಯನಮಃ
ಹುತಭುಜೇನಮಃ

ಭೋಕ್ತ್ರೇನಮಃ
ಸುಖದಾಯನಮಃ (ಅಸುಖ
ನೈಕಜಾಯನಮಃ ೯೦
ಅಗ್ರಜಾಯನಮಃ
ಅನಿರ್ವಿಣ್ಣಾಯನಮಃ
ಸದಾಮರ್ಷಿಣೇನಮಃ
ಲೋಕಾಧಿಷ್ಠಾನಾಯನಮಃ
ಅದ್ಭುತಾಯನಮಃ
ಸನಾತೇನಮಃ
ಸನಾತನತಮಾಯನಮಃ
ಕಪಿಲಾಯನಮಃ
ಕಪಯೇನಮಃ
ಅವ್ಯಯಾಯನಮಃ ೯೦೦
ಸ್ವಸ್ತಿದಾಯನಮಃ
ಸ್ವಸ್ತಿಕೃತೇನಮಃ
ಸ್ವಸ್ತಿನೇನಮಃ
ಸ್ವಸ್ತಿಭುಜೇನಮಃ
ಸ್ವಸ್ತಿದಕ್ಷಿಣಾಯನಮಃ
ಅರೌದ್ರಾಯನಮಃ
ಕುಂಡಲಿನೇನಮಃ
ಚಕ್ರಿಣೇನಮಃ
ವಿಕ್ರಮಿಣೇನಮಃ
ಊರ್ಜಿತಶಾಸನಾಯನಮಃ ೧೦
ಶಬ್ದಾತಿಗಾಯನಮಃ
ಶಬ್ದಸಹಾಯನಮಃ
ಶಿಶಿರಾಯನಮಃ
ಶರ್ವರೀಕರಾಯನಮಃ
ಅಕ್ರೂರಾಯನಮಃ

ಪೇಶಲಾಯನಮಃ
ದಕ್ಷಾಯನಮಃ
ದಕ್ಷಿಣಾಯನಮಃ
ಕ್ಷಮಿಣಾಂವರಾಯನಮಃ
ವಿದ್ವತ್ತಮಾಯನಮಃ ೨೦
ವೀತಭಯಾಯನಮಃ
ಪುಣ್ಯಶ್ರವಣಕೀರ್ತನಾಯನಮಃ
ಉತ್ತಾರಣಾಯನಮಃ
ದುಷ್ಕೃತಿಘ್ನೇನಮಃ
ಪುಣ್ಯಾಯನಮಃ
ದುಸ್ಸ್ವಪ್ನನಾಶನಾಯನಮಃ
ವೀರಘ್ನೇನಮಃ
ರಕ್ಷಣಾಯನಮಃ
ಸಂತಾಯನಮಃ
ಜೀವನಾಯನಮಃ ೩೦
ಪರ್ಯವಸ್ಥಿತಾಯನಮಃ
ಅನಂತರೂಪಾಯನಮಃ
ಅನಂತಶ್ರಿಯೇನಮಃ
ಜಿತಮನ್ಯವೇನಮಃ
ಭಯಾಪಹಾಯನಮಃ
ಚತುರಶ್ರಾಯನಮಃ
ಗಭೀರಾತ್ಮನೇನಮಃ
ವಿದಿಶಾಯನಮಃ ೪೦
ವ್ಯಾದಿಶಾಯನಮಃ
ದಿಶಾಯನಮಃ
ಭುವೇನಮಃ
ಅನಾದಯೇನಮಃ
ಭುವೋಲಕ್ಷ್ಮ್ಯೈನಮಃ
ಸುವೀರಾಯನಮಃ

ರುಚಿರಾಂಗದಾಯನಮಃ
ಜನನಾಯನವ
ಜನಜನ್ಮಾದಯೇನಮಃ
ಭೀಮಾಯನಮಃ
ಭೀಮಪರಾಕ್ರಮಾಯನಮಃ
ಆಧಾರನಿಲಯಾಯನಮಃ ೫೦
ಅಧಾತ್ರೇನಮಃ (ಧಾತ್ರೆ)
ಪುಷ್ಪಹಾಸಾಯನಮಃ
ಪ್ರಜಾಗರಾಯನಮಃ
ಊರ್ಧ್ವಗಾಯನಮಃ
ಸತ್ಪಥಾಚಾರಾಯನಮಃ
ಪ್ರಾಣದಾಯನಮಃ
ಪ್ರಣವಾಯನಮಃ
ಪಣಾಯನಮಃ
ಪ್ರಮಾಣಾಯನಮಃ
ಪ್ರಾಣನಿಲಯಾಯನಮಃ ೬೦
ಪ್ರಾಣಭೃತೇನಮಃ
ಪ್ರಾಣಜೀವನಾಯನಮಃ
ತತ್ವಾಯನಮಃ
ತತ್ವವಿದೇನಮಃ
ಏಕಾತ್ಮನೇನಮಃ
ಜನ್ಮಮೃತ್ಯುಜರಾತಿಗಾಯನಮಃ
ಭೂರ್ಭುವಸ್ಸ್ವಸ್ತರವೇನಮಃ
ತಾರಾಯನಮಃ
ಸವಿತ್ರೇನಮಃ
ಪ್ರಪಿತಾಮಹಾಯನಮಃ ೭೦
ಯಜ್ಞಾಯನಮಃ
ಯಜ್ಞಪತಯೇನಮಃ
ಯಜ್ವನೇನಮಃ
ಯಜ್ಞಾಂಗಾಯನಮಃ
ಯಜ್ಞವಾಹನಾಯನಮಃ
ಯಜ್ಞಭೃತೇನಮಃ
ಯಜ್ಞಕೃತೇನಮಃ
ಯಜ್ಞಿನೇನಮಃ
ಯಜ್ಞಭುಜೇನಮಃ
ಯಜ್ಞಸಾಧನಾಯನಮಃ ೮೦
ಯಜ್ಞಾಂತಕೃತೇನಮಃ
ಯಜ್ಞಗುಹ್ಯಾಯನಮಃ
ಅನ್ನಾಯನಮಃ
ಅನ್ನಾದಾಯನಮಃ
ಆತ್ಮಯೋನಯೇನಮಃ
ಸ್ವಯಂಜಾತಾಯನಮಃ
ವೈಖಾನಾಯನಮಃ
ಸಾಮಗಾಯನಾಯನಮಃ
ದೇವಕೀನಂದನಾಯನಮಃ
ಸ್ರಷ್ಟ್ರೇನಮಃ ೯೦
ಕ್ಷಿತೀಶಾಯನಮಃ
ಪಾಪನಾಶನಾಯನಮಃ
ಶಂಖಭೃತೇನಮಃ
ನಂದಕಿನೇನಮಃ
ಚಕ್ರಿಣೇನಮಃ
ಶಾರ್ಙ್ಗಧನ್ವನೇನಮಃ
ಗದಾಧರಾಯನಮಃ ೧೦೦೦
ರಥಾಂಗಪಾಣಯೇನಮಃ
ಅಕ್ಷೋಭ್ಯಾಯನಮಃ
ಸರ್ವಪ್ರಹರಣಾಯುಧಾಯನಮಃ
ಸರ್ವಪ್ರಹರಣಾಯುಧಾಯೋನ್ನಮಇತಿ. ಓಂ ತತ್ಸತ್.